ಭಾವಾರ್ಥ.

ಲಿಂಗವು ಕಾಲಾಗ್ನಿ ರೂಪವಾದುದು. ಕೋಟಿ ಸೂರ್ಯ ತೇಜಪ್ರ ಪ್ರಕಾಶವುಳ್ಳದು ಇದೇ ತಾರಕ ಬ್ರಹ್ಮವು ಎಂದರೆ ನೇತ್ರದಲ್ಲಿ ಇರುವ ಮುಖ್ಯವಾದ ಸೂಕ್ಷ್ಮ ಭಾಗದ ರೂಪವಾದ ಲಿಂಗವು. ಈ ಲಿಂಗವನ್ನು ಯೋಗಿಗಳು ಧರಿಸಬೇಕು.

---

೫. ಆಕಾರ ನಿರಾಕಾರ | ಏಕೋ ದೇವನೆ ತಾನು
ಸಾಕಾರವಾಗಿ — ಕರದೊಳಗೆ ಇಪ್ಪಿರವು
ಕಾಕು ನರಗುರಿಗೆ ತಿಳಿಯದದು.

ತಾತ್ಪರ್ಯ.

ಮೊದಲು ಆಕಾರ (ರೂಪ) ವಿಲ್ಲದವನು ಆಗಿದ್ದು ಮುಂದೆ ಆಕಾರವನ್ನು ತಾಳಿದ ಒಬ್ಬನೇ ದೇವನಾದ ಮಹಾದೇವನು ಆಕಾರದೊಡನೆ ಕೂಡಿ ಎಂದರೆ ರೂಪವನ್ನು ಧರಿಸಿ ಜಗತ್ತಿನ ರೂಪವಾದ ಲಿಂಗ ಸ್ವರೂಪವನ್ನು ಹೊಂದಿ ಗುರುಕರುಣೆಯಿಂದ ಹಸ್ತದಲ್ಲಿ ಇಷ್ಟಲಿಂಗವಾಗಿ ಬಂದಿರುವ ರೀತಿಯು ಅಜ್ಞಾನಿಯಾದ ಕಾಡು ಮನುಷ್ಯನಿಗೆ ತಿಳಿಯುವದಿಲ್ಲ.

ವಿಚಾರ.

ಭೂಮಿಯು ಆಕಾರವುಳ್ಳದ್ದು. ಅದು ಮೊದಲು ನೀರಿನ ರೂಪದಲ್ಲಿತ್ತು. ಆ ನೀರು ಉಷ್ಣವು ( ಬೆಂಕಿ ) ಆಗಿತ್ತು. ಈ ರೂಪವು ಎರಡು ವಿಧವಾದ ವಾಯುಗಳಿಂದ ಆಗಿತ್ತು. ವಾಯುವು ಇದಕ್ಕಿಂತಲೂ ಸೂಕ್ಷ್ಮವಾದ ಆಕಾಶದಿಂದ ಆಗಿತ್ತು. ಇದಕ್ಕೆ ಮೂಲವು ಆಕಾಶಕ್ಕಿಂತಲೂ ಸೂಕ್ಷ್ಮವಾದ ಆತ್ಮ ತತ್ವವು. ಹೀಗೆ ನಿರಾಕಾರವಾದ ಆತ್ಮ ತತ್ವವು ಭೂಮಿಯ ರೂಪದಲ್ಲಿ ಆಕಾರವಾಗಿ ಬಂದಿತೆಂಬುದನ್ನೇ ಲಿಂಗವು ತೋರಿಸುತ್ತದೆ. ಮಹಾದೇವನ ಜ್ಞಾನವಿಲ್ಲದವನು ಇದನ್ನು ತಿಳಿಯದೆ ನಿರಾಕಾರನಾದ ಮಹಾದೇವನು ಯಾರಿಗೂ ಕಾಣು

ವದಿಲ್ಲವೆಂದು ಹೇಳುತ್ತಾ, ದೇವರು ಬಹಳವಾಗಿ ಇರುವರೆಂದು ಚಿಂತಿಸುತ್ತಾ, ಹಿಂದೆ ಅವಯವಗಳನ್ನು ಧರಿಸಿ ಕಾಣಿಸಿಕೊಂಡ ಯಾವದಾದರೂ ಮೂರ್ತಿಯನ್ನು ನಂಬಿ ಅಂಥಾ ಮೂರ್ತಿಯ (ಮೂರ್ತಿಗಳ) ಪೂಜೆಯನ್ನು ಮಾಡುತ್ತಾ ಮೂಢನಾಗಿರುವನು.

ಪ್ರಮಾಣ.

ಶ್ವೇತಾಶ್ವತರ ಉಪನಿಷತ್ತು: ೬ ನೆಯ ಅಧ್ಯಾಯ.

ಏಕೋ ದೇವಃ ಸರ್ವ ಭೂತೇಷು ಗೂಢಃ ಸರ್ವ ವ್ಯಾಪೀ
ಸರ್ವ ಭೂತಾಂತರಾತ್ಮಾ

ಒಬ್ಬನೇ ದೇವನು ಎಲ್ಲಾ ಭೂತಗಳಲ್ಲಿ ಗುಪ್ತನಾಗಿರುವನು, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ ಇರುವನು, ಸಮಸ್ತ ಚರಾಚರ ವಸ್ತುಗಳ ಒಳಗೆ ಇರುವನು.

ಜಾಬಾಲದರ್ಶನ ೪ ನೆಯ ಖಂಡ.

ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ

ಅಜ್ಞರುಗಳು ಮಹಾದೇವನು ಉಂಟೆಂದು ಭಾವಿಸುವಸಾಧನೆಗಾಗಿ ಅವಯವಗಳುಳ್ಳ ಪ್ರತಿಮೆ ( ಮೂರ್ತಿ ) ಗಳು ಕಲ್ಪಿಸಲ್ಪಟ್ಟಿರುತ್ತವೆ.

ವಿಚಾರ

ಆತ್ಮನಲ್ಲಿ ವ್ಯಾಪಿಸಿದ ಏಕೋ ದೇವನ ರೂಪವೇ ಲಿಂಗವು. ಇದನ್ನು ನಂಬಿದವನು ಪ್ರತಿಮೆಗಳನ್ನು ಪೂಜಿಸಬಾರದು. ಲಿಂಗವು ಪ್ರತಿಮೆಯುಲ್ಲ ಎಂಬರೆ ಹೊರಗೆ ತೋರುವ ರೂಪಮಾತ್ರವೇವುಳ್ಳ ಮೂರ್ತಿಯಲ್ಲ.

---

೬. ಸಕಲನಿಷ್ಕಲ ಶಿವನು । ಸಕಲ ನಿಷ್ಕಲ ರಹಿತ
ಅಖಿಳರೊಳಗಿದ್ದು — ಇಲ್ಲದಿಹ ಅಭವನನು
ವಿಕಳನದ್ವೈತಿ ತಿಳಿಯನಲೆ.

## ತಾತ್ಪರ್ಯ

ನಿರಾಕಾರ ಶಿವನ ಸಕಲನಿಷ್ಕಲ ರೂಪವು, ಸಕಲವೂ (ರೂಪವಾಗಿ ಕಾಣುವದೂ) ನಿಷ್ಕಲವೂ (ರೂಪವಾಗಿ ಕಾಣದಿರುವುದೂ) ಆಗದೆ, ಸರ್ವವಸ್ತುಗಳಲ್ಲಿ ವ್ಯಾಪಿಸಿಕೊಂಡಿದ್ದೂ ಇಲ್ಲದಂತೆ ಇರುತ್ತದೆ ಇಂಥಾ ಪರಬ್ರಹ್ಮ ರೂಪವನ್ನು ಜಡನಾದ ಅದ್ವೈತಿಯು ತಿಳಿಯುವದಿಲ್ಲವಲ್ಲವೇ?

## ವಿಚಾರ

ಆತ್ಮನ ಕಾರಣ ರೂಪವು ನಿಷ್ಕಲವೆನಿಸಿಕೊಂಡಿರುತ್ತದೆ. ಇದು ಧ್ಯಾನಕ್ಕಾಗಿ ಪೂಜೆಗಾಗಿ ಸಿಕ್ಕುವದಿಲ್ಲ. ಯೋಗಿಗಳ ಧ್ಯಾನ ಪೂಜೆಗೋಸ್ಕರವಾಗಿ ಸಕಲ ನಿಷ್ಕಲ ಎನಿಸಿಕೊಳ್ಳುವ ಒಂದು ರೂಪವನ್ನು ಅದೆ ತಾಳುತ್ತದೆ. ಇದೇ ಲಿಂಗ ರೂಪವು. ಇದೇ ಪ್ರಾಣಲಿಂಗವು, ಇದು ಕೇವಲ ಸಕಲವೂ ಅಲ್ಲ. ಸಕಲವೆಂದರೆ ಹೊರಗಿನ ರೂಪಿನಲ್ಲಿ ಮಾತ್ರ ತಿಳಿಯುವಂಥಾದ್ದು.

ಮಾತಿನ ಅದ್ವೈತಿಯು ಬ್ರಹ್ಮವೆಂದು ಹೇಳುವಲ್ಲೆಲ್ಲಾ ನಿಷ್ಕಲ ಬ್ರಹ್ಮನ ವಿಷಯವಿರುತ್ತದೆ. ಬ್ರಹ್ಮನ ಸಕಲನಿಷ್ಕಲ, ರೂಪವು ಆವನಿಗೆ ತಿಳಿದೇ ಇಲ್ಲ. ಸಕಲವು ಸಗುಣವೆಂದು ಅದನ್ನು ಆ ಅದ್ವೈತಿಯು ಅಂಗೀಕರಿಸುವದಿಲ್ಲ.

## ಸಾಕ್ಷಿ

ಯೋಗಿನಾಂ ಚ ಯತೀನಾಂ ಚ ಜ್ಞಾನಿನಾಂ ಮಂತ್ರಿಣಾಮಥ।
ಧ್ಯಾನ ಪೂಜಾ ನಿಮಿತ್ತಾಯ ಸಕಲಂ ನಿಷ್ಕಲಂ ಭವೇತ್॥

ಭಾವಾರ್ಥ:- ಯೋಗಿಗಳಾದವರ, ಯತಿಗಳಾದವರ, ಜ್ಞಾನಿಗಳಾದವರ, ಮತ್ತು ಮಂತ್ರ ವಿದ್ಯೆಯನ್ನು ಬಲ್ಲವರ ಧ್ಯಾನ ಪೂಜೆಗಳಿಗೋಸ್ಕರವಾಗಿ ಮಹಾದೇವನ ಸಕಲ ನಿಷ್ಕಲ ರೂಪವು ಇರುತ್ತದೆ.

## ಪ್ರಮಾಣ.

ಶಾಂಡಿಲ್ಯೋಪನಿಷತ್ : ಮೂರನೆಯ ಅಧ್ಯಾಯ
ಸ ಹೋವಾಚಾಥರ್ವಾ

ಸತ್ಯಂ ಶಾಂಡಿಲ್ಯ, ಪರಂ ಬ್ರಹ್ಮ ನಿಷ್ಕ್ರಿಯಮಕ್ಷರಮಿತಿ
ಅಥರ್ವನು ಶಾಂಡಿಲ್ಯನಿಗೆ ಹೇಳುತ್ತಾನೆ.

ಶಾಂಡಿಲ್ಯನೇ, ಪರಬ್ರಹ್ಮನು ಸತ್ಯನು, ನಿಷ್ಕ್ರಿಯನು (ಕ್ರಿಯಾ ರ
ಹಿತನು) ಅಕ್ಷರನು (ನಾಶವಿಲ್ಲದವನು)
ಅಥಾಸ್ಯಸ್ಯಾರೂಪಸ್ಯ ಬ್ರಹ್ಮಣಸ್ತ್ರೀಣಿ ರೂಪಾಣಿಭವಂತಿ,
ಸಕಲಂ, ನಿಷ್ಕಲಂ, ಸಕಲನಿಷ್ಕಲಂ ಚೇತಿ
ರೂಪವಿಲ್ಲದ ಪರಬ್ರಹ್ಮನಿಗೆ ಮೂರು ರೂಪಗಳು ಉಂಟು, ಸಕಲ, ನಿಷ್ಕಲ, ಸಕಲನಿಷ್ಕಲ ಎಂಬದಾಗಿ.

---

೭ ತುಪ್ಪ ಹೆಪ್ಪಾದಂತೆ । ತುಪ್ಪ ತಿಳಿಯಾದಂತೆ
ಇಪ್ಪುದಾಲಿಂಗ, — ಪೂಜೆಗೋಸ್ಕರವಾಗಿ
ಹೆಪ್ಪಾದುದೆಂದು ತಿಳಿಯನಲೆ॥

### ತಾತ್ಪರ್ಯ

ತುಪ್ಪವು ಕರಗಿ ದ್ರವ ರೂಪವನ್ನುಧರಿಸುತ್ತದೆ, (ತಿಳಿಯಾಗುತ್ತದೆ) ಇದೇ ತುಪ್ಪವು ಹೆಪ್ಪಾಗುತ್ತದೆ (ಗಟ್ಟಿಯಾಗುತ್ತದೆ) ಇದರಂತೆಯೇ ಲಿಂಗವು (ಮಹಾದೇವನು) ಪೂಜೆಗೋಸ್ಕರವಾಗಿ ಗಟ್ಟಿಗೊಂಡು ಗುರುಕರುಣದಿಂದ ಕೈಗೆ ಬಂದದ್ದನ್ನು ಆ ಬರಿಯ ಮಾತಿನ ಅದ್ವೈತಿಯು ತಿಳಿಯುವದಿಲ್ಲ.

### ವಿಚಾರ

ನಿಷ್ಕಲ ರೂಪವು ಸಕಲನಿಷ್ಕಲವಾಗಿ ಲಿಂಗವೆನಿಸಿಕೊಂಡು ಧ್ಯಾನ ಪೂಜೆಗೆ ಸಿಕ್ಕಿರುತ್ತದೆ.

### ಸಾಕ್ಷಿ

ಘೃತ ಕಾಠಿಣ್ಯವನ್ಮೂರ್ತೇ ಸ್ಸಚ್ಚಿದಾನಂದ ಲಕ್ಷಣಃ ।

ಶಿವಾದನ್ಯೋ ನ ದೇವೋಽಸ್ತಿ ಶಿವ ಏವ ಹಿ ಕೇವಲಃ

ಭಾವಾರ್ಥ :— ಮೂರ್ತಿಯು (ಪರಾತ್ಪರ ವಸ್ತುವಿನ) ಸತ್ತು ಚಿತ್ತು, ಆನಂದ ಎಂಬ ಮೂರು ಲಕ್ಷಣಗಳುಳ್ಳ ಸ್ಥಿತಿಯು ತುಪ್ಪವು ಹೆಪ್ಪಾದಂತೆ ಇದೆ. ಶಿವನಿಗಿಂತ ಬೇರೆಯಾಗಿ ದೇವನಿಲ್ಲ. ಶಿವನೊಬ್ಬನೇ ದೇವನಾಗಿ ಇರತಕ್ಕವನು. :- ಸಚ್ಚಿದಾನಂದವೆಂಬ ಲಕ್ಷಣಕ್ಕೆ ಮೀರಿ ಅದರ ಮೂಲ ಸ್ವರೂಪವಾಗಿರುವ ಪರವಸ್ತುವೂ (ನಿಷ್ಕಲನೂ) ಸಚ್ಚಿದಾನಂದ ಲಕ್ಷಣವನ್ನು ಧರಿಸಿ (ಸಕಲ ನಿಷ್ಕಲನೂ) ಮುಂದೆ ಜಗದ್ರೂಪ (ವಿರಾಡ್ರೂಪ = ಸಕಲ) ನೂ ಆಗಿರುವನು. ಇಲ್ಲಿ ಸಚ್ಚಿದಾನಂದ ಲಕ್ಷಣವುಳ್ಳದ್ದೆಂದು ಹೇಳುವ ಪರಬ್ರಹ್ಮವೇ ಲಿಂಗವು. (ಮೂರ್ತಿ ಎಂಬ ಪದವನ್ನು ಅವಯವಗಳುಳ್ಳ ದೇವನಿಗೆ ಉಪಯೋಗಿಸಿದ ಉದಾಹರಣೆಗಳು ಅನೇಕ ಕಡೆ ಇವೆ. ಇಲ್ಲಿ ನಿರಾಕಾರ ವಸ್ತುವಿಗೆ ಉಪಯೋಗಿಸಿದ್ದಾರೆ ಎಂಬುದು, ಹಿಂದುಮುಂದಿನ ಸಂದರ್ಭಗಳಿಂದ ಚನ್ನಾಗಿ ಗೊತ್ತಾಗುತ್ತದೆ. ಕೆಲವು ಪದಗಳನ್ನು ಗೊತ್ತಾದ ಅರ್ಥದಲ್ಲಿ ಇಡದೆ ನಾನಾ ಅರ್ಥದಲ್ಲಿ ಇಟ್ಟಿರುವದರಿಂದ ಶಾಸ್ತ್ರ ವಿಚಾರವು ಒಂದೇ ವಿಧವಿಲ್ಲವೆಂದು ತೋರುವಂತೆ ಆಗಿರುತ್ತದೆ. ಕಾರಣಗಳನ್ನೂ ಸಂದರ್ಭಗಳನ್ನೂ ಪರಿಶೀಲಿಸಿ ಪದಗಳಿಗೆ ಅರ್ಥಮಾಡಿಕೊಂಡರೆ ಶಾಸ್ತ್ರ ವಿಚಾರವು ಒಂದೇ ಗುರಿಯುಳ್ಳದ್ದಾಗಿದೆ, ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.)

ಪ್ರಮಾಣ

ಸೂಕ್ಷ್ಮಾಗಮ ೬ನೆಯ ಪಟಲ.

ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ
ಧ್ಯಾಯತೇ ಯಃ ಸದಾ ದೇವಿ ಸ ಮುಕ್ತೋ ನಾತ್ರ ಸಂಶಯಃ

ಸಚ್ಚಿದಾನಂದ ಲಕ್ಷಣವುಳ್ಳ ಪರಬ್ರಹ್ಮವಾದ ಲಿಂಗವನ್ನು ಯಾವನು ಸದಾ ಧ್ಯಾನಮಾಡುವನೋ ಅವನು ಮುಕ್ತನು. ಇದರಲ್ಲಿ ಸಂಶಯವಿಲ್ಲ.

———

## ವಿಚಾರ

ಲಿಂಗವೆಂಬುದು ಕೈಲಾಸದ ಶಂಕರ, ವೈಕುಂಠದ ವಿಷ್ಣು ಇವರ ಮೂರ್ತಿಗಳಂತೆ ಆಕಾರವುಳ್ಳ ಒಂದು ಮೂರ್ತಿಯಲ್ಲ. ಜಗದ್ರೂಪವನ್ನು ತೋರಿಸುವಂತಿರುವ ಬ್ರಹ್ಮನ ಸಾಕಾರ ರೂಪವಾಗಿದೆ. ಮತ್ತು ಇದು ಅವಯವಗಳಿಲ್ಲದ (ನಿರಾಕಾರ) ಮಹಾದೇವನ ಸ್ವರೂಪವಾಗಿದೆ. ಭಾವನೆಯಿಂದ ಇದರಲ್ಲಿ ಅವಯವಗಳುಳ್ಳ ಮೂರ್ತಿಗಳೂ ಅಡಗಿರಲಿಕ್ಕೆ ಅವಕಾಶವಿದೆ.

## ಪ್ರಮಾಣ

### ಸೂಕ್ಷ್ಮಾಗಮ ೬ ನೆಯ ಪಟಲ

ಲಿಂಗೇ ಸಂಪೂಜಿತೇ ತಸ್ಮಿನ್ ಪೂಜಿತಾಃ ಸರ್ವ ದೇವತಾಃ

## ಭಾವಾರ್ಥ

ಲಿಂಗವನ್ನು ಪೂಜಿಸಿದರೆ ಎಲ್ಲಾ ದೇವತೆಗಳನ್ನು ಪೂಜಿಸಿದಂತಾಗಿರುತ್ತದೆ.

---

೮. ಇಷ್ಟಲಿಂಗವು ತನ್ನ । ನಿಷ್ಟವನು ಪರಿಹರಿಸಿ
ಇಷ್ಟ ಸಿದ್ಧಿಯನು — ಕೊಡುವ ವಸ್ತುವಿದೆಂಬ
ನಿಷ್ಠೆ ನೆಲೆಗೊಳದಧಮರಿಗೆ

## ತಾತ್ಪರ್ಯ

ತನಗೆ ಬೇಕಾದುದಲ್ಲದ್ದನ್ನು ಹೋಗಲಾಡಿಸಿ ಎಂದರೆ ತಿರುತಿರುಗಿ ಹುಟ್ಟಿ ಬಂಧನಕ್ಕೆ ಒಳಗಾಗುವದನ್ನು ತಪ್ಪಿಸಿ, ತನಗೆ ಬೇಕಾದ ಸಿದ್ಧಿಗಳನ್ನು ಕೊಡುವ ಎಂದರೆ ಶಿವಸ್ವರೂಪನೇ ತಾನೆಂಬ ನಿಜವನ್ನು ಸಿದ್ಧಿಸಿ ಕೊಡುವ ವಸ್ತುವು ಇಷ್ಟಲಿಂಗವು ಎಂಬ ನಿಷ್ಠೆಯು ಉತ್ತಮರಲ್ಲದವರಿಗೆ ದೃಢವಾಗಿ ಇರುವದಿಲ್ಲ.

## ಸಾಕ್ಷಿ

ಇಷ್ಟಮೂರ್ಜಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ॥
ಇಷ್ಟಲಿಂಗಮಿತಿ ಪ್ರಾಹ ತಸ್ಮಾದಾಥರ್ವಣೀ ಶೃತಿಃ ॥

ಭಾವಾರ್ಥ:— ತನ್ನ ಭಕ್ತರಿಗೆ ಬೇಕಾದ ಇಷ್ಟವನ್ನು ಯಾವಾಗಲೂ ಕೊಡುತ್ತದೆ, ಆದ್ದರಿಂದ ಅಥರ್ವಣವೇದವು ಇದಕ್ಕೆ ಇಷ್ಟ ಲಿಂಗವೆಂದು ಹೆಸರಿಸಿತು. (ಯಾವುದಾದರೂ ಸುಖೇಚ್ಛೆಯು ಶಿವಪ್ರಸಾದವಾಗಿ ಬರಲೆಂದು ಶಿವಭಕ್ತರು ಅಪೇಕ್ಷಿಸಿದರೆ ಫಲರೂಪವಾಗಿ ಅದನ್ನು ಲಿಂಗವು ಕೊಡುತ್ತದೆ ಎಂಬ ಅಭಿಪ್ರಾಯವು ಇದರಿಂದ ವ್ಯಕ್ತವಾಗುತ್ತದೆ.)

## ಪ್ರಮಾಣ

( ಸೂಕ್ಷ್ಮಾಗಮ ೬ ನೆಯ ಪಟಲ )

ಕೃತ್ವಾ ಷೋಡಶ ದಾನಾನಿ ಯತ್ ಫಲಂ ಪ್ರತಿಪದ್ಯತೇ॥
ತತ್ ಫಲಂ ಸಮವಾಪ್ನೋತಿ ಲಿಂಗನ್ಯಸ್ತೈಕ ಪುಷ್ಪತಃ

............

ದರ್ಶನಾತ್ ಸರ್ವ ಪಾಪಘ್ನಂ ಸ್ಪರ್ಶನಾದಖಿಲಾರ್ಥದಂ
ಅರ್ಚನಾನ್ ಮೋಕ್ಷದಂದೇವಿ ಲಿಂಗಂ ಕೋ ವಾ ನಪೂಜಯೇತ್

## ಭಾವಾರ್ಥ

ಷೋಡಶದಾನಗಳನ್ನು ಎಂದರೆ ಕನ್ಯಾದಾನ, ಹಿರಣ್ಯದಾನ, ಅನ್ನದಾನ ಮೊದಲಾದವುಗಳನ್ನು ಮಾಡಿದರೆ ಯಾವ ಫಲವು ಬರುವದೋ ಆ ಫಲವನ್ನು ಲಿಂಗದಲ್ಲಿ ಪುಷ್ಪವನ್ನು ಧರಿಸಿದ ಮಾತ್ರದಿಂದ ಪಡೆಯುತ್ತಾನೆ .... ಲಿಂಗದರ್ಶನದಿಂದ ಪಾಪವು ನಾಶವಾಗುತ್ತದೆ. ಮುಟ್ಟುವಿಕೆಯಿಂದ ಸಮಸ್ತ ಅಭಿಲಾಷೆಗಳನ್ನೂ ಕೊಡುತ್ತದೆ. ಪೂಜಿಸುವದರಿಂದ ಮೋಕ್ಷವನ್ನು ಕೊಡುತ್ತದೆ. ಆದ್ದರಿಂದ ಲಿಂಗವನ್ನು ಯಾರು ತಾನೇ ಪೂಜಿಸುವದಿಲ್ಲ? ಎಂದರೆ ಎಲ್ಲರೂ ಪೂಜಿಸಬೇಕು.

---

೯. ಪೃಷ್ಟ ವಪ್ಪುದು ಕಾಸು । ನಷ್ಟ ವಪ್ಪುದು ಎಂದು
ಸೃಷ್ಟಿಗೀಶ್ವರನ,—ನುಡಿಯೆ ಸನತ್ಕುಮಾರ
ಒಟ್ಟಿ ಯಾದುದನು, ತಿಳಿ ಎಲವೊ

ತಾತ್ಪರ್ಯ

ಕಣ್ಣಿಗೆ ಕಂಡವಸ್ತುವು ನಾಶವನ್ನು ಹೊಂದುತ್ತದೆ, ಆದ್ದರಿಂದ ಲಿಂಗವೂ ಹೀಗೆಯೇ ಎಂದು ಬ್ರಹ್ಮನ ಮಗನಾದ ಸನತ್ಕುಮಾರನು ಹೇಳಲು ಅವನಿಗೆ ಶಾಪ ಬಂದು ಒಂಟಿಯಾದನು.

ಸಾಕ್ಷಿ

ಯಸ್ಯ ಚಿತ್ತಂ ಶಿವೇ ಲೀನಂ ತಸ್ಯ ಜಾತ್ಯಾದಿಕಂ ನ ಚ ।
ಶಿವಲಿಂಗೇ ಶಿಲಾಬುದ್ಧಿಂ ಕುರ್ವಾಣಸ್ಸ ತು ಪಾತಕೀ ॥

ಭಾವಾರ್ಥ— ಯಾವನ ಮನಸ್ಸು ಶಿವನಲ್ಲಿ (ಲಿಂಗದಲ್ಲಿ) ಕರಗಿ ಹೋಗಿದೆಯೋ ಎಂದರೆ ಯಾವನ ಮನಸ್ಸು ಪ್ರಾಣ ಲಿಂಗವೇ ಆಗಿರುವದೋ ಅವನಿಗೆ ಜಾತ್ಯಾದಿಗಳು ಇಲ್ಲ. ಶಿವಲಿಂಗ (ದೇಹದಲ್ಲಿ ಧರಿಸಿಕೊಂಡಿರುವ ಲಿಂಗ) ದಲ್ಲಿ ಅದು ಕಲ್ಲೆಂಬ (ಮೂರ್ತಿ ಎನ್ನುವ) ಬುದ್ಧಿಯನ್ನು ಉಳ್ಳವನು ಪಾಪಿಯು.

ವಿಚಾರ

ಇಷ್ಟ ಲಿಂಗ, ಪ್ರಾಣ ಲಿಂಗ, ಭಾವ ಲಿಂಗಗಳನ್ನು ಧರಿಸಿದವರಾದ ಎಂದರೆ ಶಿವ ಸ್ವರೂಪರೇ ಆದ ಶಿವಭಕ್ತರಿಗೆ ಜಾತಿ ಮೊದಲಾದ ಬಂಧನಗಳು ಇಲ್ಲ. ಇವರೂ ವರ್ಣಗಳನ್ನು ಮೀರಿದವರು ಅತಿವರ್ಣಿಗಳು (ಆದರೆ ಶಿವ ಸ್ವರೂಪವನ್ನು ಹೊಂದದೆ ಇರುವ ಇತರರಿಗೆ ಜಾತಿ ಭೇದಗಳು ಉಂಟು. ಶಿವತತ್ವವನ್ನು ಸಂಪಾದಿಸುವದಕ್ಕಾಗಿಯೇ ಜಾತಿಕರ್ಮಗಳು ಉಂಟಾಗಿವೆ, ಎಂದು ತಿಳಿಯಬೇಕು.)

ಶಿವಭಕ್ತರು ಧರಿಸಿರುವ ಶಿವಲಿಂಗದಲ್ಲಿ ಭಾವದೊಳಗಿನ ಲಿಂಗ ಪ್ರಾಣದೊಳಗಿನ ಲಿಂಗಗಳು ಕೂಡಿಕೊಂಡಿರುವದರಿಂದ ಅದು ಶಿಲೆಯು

ಲ್ಲ. ಶಿಲೆಯಲ್ಲಿ ಸ್ಥಾಪಿಸಿದ್ದಾಗಿದ್ದರೆ ಸ್ಥಾವರಲಿಂಗಗಳಂತೆ ಎಲ್ಲರ ಪೂಜೆಗೆ ಸಿಕ್ಕುತ್ತಿತ್ತು, ಮೂರ್ತಿಯೂ (ವಿಗ್ರಹವೂ) ಆಗುತ್ತಿತ್ತು.

ಇದು ಒಬ್ಬನ ದೇಹವನ್ನು ಲಿಂಗವೆಂಬ ಭಾವನೆಗೆ ತರುವವಲ್ಲದೆ ಅವನ ಮನದಲ್ಲಿಯೂ ಭಾವದಲ್ಲಿಯೂ ಲಿಂಗವನ್ನು ನೆಲೆಗೊಳಿಸುತ್ತದೆ. (ಲಿಂಗ ರೂಪವಾಗಿರುತ್ತದೆ) ಆದ್ದರಿಂದ ಇದು ಶಿಲಾಮಾತ್ರದಲ್ಲಿ ಸ್ಥಾಪಿಸಲ್ಪಟ್ಟ ದೇವನಲ್ಲ, ಮತ್ತು ಮೂರ್ತಿಯೂ (ವಿಗ್ರಹವೂ) ಅಲ್ಲ.

---

೧೦. ಲಿಂಗವಂಗದಲಿರಲು । ಲಿಂಗವನು ಅರ್ಚಿಸದೆ
ಲಿಂಗಕರ್ಪಿಸದೆ, — ಭುಂಜಿಸುವ ನರನವಗೆ
ಹಿಂಗದೆಂದೆಂದು ನರಕವದು.

ತಾತ್ಪರ್ಯ

ಲಿಂಗವನ್ನು ಅಂಗದಲ್ಲಿ ಧರಿಸಿದ್ದಾಗ್ಯೂ ಆ ಲಿಂಗನನ್ನು ಪೂಜಿಸದೆ, ಆ ಲಿಂಗಕ್ಕೆ ತಾನು ಸ್ವೀಕರಿಸತಕ್ಕ ಪದಾರ್ಥಗಳನ್ನು ಅರ್ಪಿಸದೆ, ಸ್ವೀಕರಿಸುವ ಮನುಷ್ಯನಿಗೆ ಮರಳಿ ಗರ್ಭವಾಸದಲ್ಲಿ ಬರತಕ್ಕ ಬಂಧನವು ಎಂದೆಂದೂ ತಪ್ಪುವದಿಲ್ಲ.

ವಿಚಾರ

ಮನುಷ್ಯನಾದವನು ಶಿವನ (ಲಿಂಗದ) ಸ್ವರೂಪವನ್ನು ಹೊಂದಿರುವುದು ಆ ಶಿವನ ಸಾಕಾರರೂಪ (ಬ್ರಹ್ಮ) ದ ಧಾರಣದಿಂದಲ್ಲದೆ ಸಾಧ್ಯವಾಗದು. ನಶ್ವರವಾಗುವ ದೇಹವನ್ನು ತಾನು ಹೇಗೆ ಧರಿಸಿರುವನೋ ಹಾಗೆ ದೇಹವನ್ನು ಶಿವನೆಂದು ಗುರ್ತಿಸುವ ಬ್ರಹ್ಮ (ಲಿಂಗ) ವನ್ನು ದೇಹವು ಕಾಣಬರುವ ವರೆವಿಗೂ ಧರಿಸಬೇಕು. ಹೀಗೆ ಧರಿಸಿದ ಲಿಂಗವು ತಾನೇ ಎಂದು ತಿಳಿದು ಆ ಲಿಂಗವನ್ನು ಪೂಜಿಸಿ (ಪೂಜ್ಯವೆಂದು ಆಚರಿಸಿ) ಮನ ಭಾವಗಳಲ್ಲಿ ಲಿಂಗವುಳ್ಳವನಾಗಿ ಆ ಲಿಂಗಕ್ಕೆ ಅರ್ಪಿಸಿದ ಪ್ರಸಾದವನ್ನು ತೆಗೆದುಕೊಳ್ಳದೆ, ತಾನು ಬ್ರ

ಹ್ಮವೆಂದು ಬಾಯಲ್ಲಿ ಹೇಳುತ್ತಾ ಹೊಟ್ಟೆಯ ಹಸಿವಿಗೆ ಉಣಬೇಕು ಎಂದು ಊಟ ಮಾಡುವದಾದರೆ ಮರಳಿ ಹುಟ್ಟುವವರಲ್ಲಿ ಸಂಶಯ ವೇನು? ಹುಟ್ಟಿಯೇ ಹುಟ್ಟುವನು.

ಸಾಕ್ಷಿ

ಯಸ್ತು ಲಿಂಗಾರ್ಚನಂ ತ್ಯಕ್ತ್ವಾ ಭುಂಕ್ತೇ ವಿಷ್ಠಾಂ ವರಾಹವತ್
ನರೋ ನಿರಯಮಾಪ್ನೋತಿ ಸರ್ವಲೋಕೇ ಬಹಿಷ್ಕೃತಃ

ಭಾವಾರ್ಥ:— ಯಾವನು ಲಿಂಗ ಪೂಜೆಯನ್ನು ಬಿಟ್ಟು ಹಂದಿಯು ಮಲವನ್ನು ತಿನ್ನುವಂತೆ ಮಲತ್ರಯಗಳಿಂದ ಕೂಡಿದ ಪ್ರಾಪಂಚಿಕ ಆಹಾರವನ್ನು ಊಟಮಾಡುತ್ತಾನೋ ಆ ಮನುಷ್ಯನು ಸರ್ವಲೋಕಗಳಿಂದ ಹೊರಗೆ ಹಾಕಲ್ಪಟ್ಟು ಗರ್ಭವೆಂಬ ನರಕವನ್ನು ಹೊಂದಿ ಮರಳಿ ಹುಟ್ಟುತ್ತಾನೆ.

ಪ್ರಮಾಣ

ಪಾರಮೇಶ್ವರಾಗಮ ೩ ನೆಯ ಪಟಲ ಶ್ಲೋಕ ೬೩

ನ ತಿಷ್ಠೇನ್ನಿಯಮೇನಾಸೌ ಲಿಂಗ ಸಂಪೂಜನಾದೃತೇ

ಭಾವಾರ್ಥ:— ಇವನು (ವೀರಶೈವನು) ಲಿಂಗಪೂಜೆಯನ್ನು ಬಿಟ್ಟು ಬೇರೆ ಯಾವ ನಿಯಮದಿಂದಲೂ ಇರಬಾರದು.

ಸದರ ೫ ನೆಯ ಪಟಲ ಶ್ಲೋಕ ೩೭-೩೮

ನ ಸ್ವಸ್ಥಃ ಸಂತ್ಯಜೇತ್ ಪೂಜಾಂ ನಾನಾಪದ್ಯನಿಮಿತ್ತತಃ
ಯದಿ ತ್ಯಜತಿ ಮೂಢಾತ್ಮಾ ರೌರವಂ ನರಕಂ ವ್ರಜೇತ್

ಭಾವಾರ್ಥ:—ಆರೋಗ್ಯದಲ್ಲಿದ್ದವನಾಗಲೀ, ಅನೇಕ ಆಪತ್ತುಗಳು ಬಂದಾಗ್ಯೂ ಕಾರಣವಿಲ್ಲದೆಯಾಗಲೀ, ಶಿವಪೂಜೆಯನ್ನು ಬಿಡಬಾರದು. ಹಾಗೆ ಬಿಡುವದಾದರೆ ಅವನು ದಡ್ಡನು.

ವಿಚಾರ.

ತಾನು ಶಿವ ಎಂಬ ಭಾವನೆಯುಂಟಾಗುವದರ ಕಾರ್ಯವೇ ಲಿಂಗ ಪೂಜೆಯು. ಇದು ಇಲ್ಲದೆ ತಾನು ಮನುಷ್ಯ ಎಂಬ ಭಾವನೆಯಿಂದ ಮಾಡಿದ ಪೂಜಾ ಅಥವಾ ಭಕ್ತಿಯ ಕಾರ್ಯವೆಲ್ಲವೂ ಸುಖ (ಪುಣ್ಯ) ದ ಫಲವನ್ನು ಕೊಡುವವೇ ಹೊರತು ಮರಳಿ ಹುಟ್ಟುವದನ್ನು ತಪ್ಪಿಸುವದಿಲ್ಲ. ಆದ್ದರಿಂದ ಅಂಥಾ ಲಿಂಗ ಪೂಜೆಯು ಅವಶ್ಯಕ.

---

೧೧. ಲಿಂಗವನು ಅರ್ಚಿಸದೆ ಲಿಂಗಕ್ಕೆ ಅರ್ಪಿಸದೆ
ಲಿಂಗ ತಾನೆಂದು,—ಭುಂಜಿಸಿದ ಅನ್ನ, ತಾ
ಪಿಂಗದೆ ಪೆಣನು, ಮಲವಕ್ಕು

ತಾತ್ಪರ್ಯ

ಅದ್ವೈತಿಯು ಲಿಂಗ ತಾನು (ಸೋಹಂ) ಎಂದು ಹೇಳುತ್ತಾ ಲಿಂಗವನ್ನು ಪೂಜಿಸದೆ ಲಿಂಗಕ್ಕೆ ಅರ್ಪಿಸದೆ ಊಟಮಾಡಿದ ಅನ್ನವು ಮಲವಾಗಿರುತ್ತದೆ, ಮತ್ತು ಅವನು ಹೆಣನು (ಶವ ರೂಪನು). ಶಿವ ರೂಪನಲ್ಲ. ಎಂದರೆ ಹೆಣಕ್ಕೆ ತಾನು ದೇಹಸ್ವರೂಪನೆಂಬ ಎಚ್ಚರಿಕೆಯು ಹೇಗೆ ಇಲ್ಲವೋ ಹಾಗೆ ಇವನಿಗೆ ತಾನು ಶಿವಸ್ವರೂಪನೆಂಬ ಎಚ್ಚರಿಕೆಯು ಇಲ್ಲ.

ವಿಚಾರ

ಅದ್ವೈತಿಯು ತಾನು ಬ್ರಹ್ಮನೆಂದು ಹೇಳಿದಮಾತ್ರಕ್ಕೆ ಬ್ರಹ್ಮನಾಗುವನೇನು? ಬ್ರಹ್ಮವು ನಿರಾಕಾರನೆಂದು ತಾನು ಒಪ್ಪುತ್ತಾನೆ ಅದರಂತೆ ತಾನು ನಿರಾಕಾರನೇನು? ನಿರಾಕಾರವಾದವಸ್ತುವು ಊಟಮಾಡುವದೇ ಮುಂತಾದ ಕಾರ್ಯಗಳನ್ನು ಮಾಡುವದಿಲ್ಲ ಆದ್ದರಿಂದ ತಾನು ಸಾಕಾರನು. ಹೀಗೆ ತಾನು ಸಾಕಾರನಾಗಿ ತೋರಿದ ಮೇಲೆ ಬ್ರಹ್ಮ

ನನ್ನು ಸಾಕಾರ ರೂಪ (ಲಿಂಗ) ವಾಗಿ ಭಾವಿಸಿ ಪೂಜಿಸಬೇಕು. ಮತ್ತು ಲಿಂಗಕ್ಕೆ ಅರ್ಪಿಸಿ ಪ್ರಸಾದವನ್ನು ಗ್ರಹಿಸಬೇಕು. ಹಾಗಿಲ್ಲದಿದ್ದರೆ ಅವನು ವೇಷದ ಬ್ರಹ್ಮ ಮತ್ತು ಅವನ ನಡತೆಯು ಲೋಕದ ಪ್ರಾಣಿಗಳಂತೆ ಆಗಿರುವದರಿಂದ ಪ್ರಾಣಿಗಳಂತೆ ತಿರುಗಿ ಹುಟ್ಟಿ ಬರುವದಕ್ಕೆ ಅವಕಾಶವುಳ್ಳ ಮಲತ್ರಯ ರೂಪದ ಭೌತಿಕವಸ್ತುಗಳನ್ನೇ ಅವನು ಉಣ್ಣುತ್ತಾನೆ, ಆದ್ದರಿಂದ ಅವನಲ್ಲಿ ನಿಜವಾದ ಶಿವ ಸ್ವರೂಪವಿಲ್ಲ.

## ಸಾಕ್ಷಿ

ಆದಿತ್ಯ ಪುರಾಣೇ :—

ಅಕೃತ್ವಾ ಪೂಜನಂ ಶಂಭೋರ್ಯೋ ಭುಂಕ್ತೇ ಪಾಪಕೃದ್ದ್ವಿಜಃ
ಕುಣಪಸ್ಸಮಲಂ ಚೈಷಸ್ಸಮಶ್ನಾತಿ ದಿನೇ ದಿನೇ॥

ಭಾವಾರ್ಥ:— ಬ್ರಾಹ್ಮಣನು ಶಂಭುವಿನ ಪೂಜೆಯಿಲ್ಲದೆ ಊಟಮಾಡಿದರೆ ಪಾಪಮಾಡಿದಂತೆ. ಮತ್ತು ಇವನು ಹೆಣನು. ಇವನು ದಿನದಿನದಲ್ಲಿ ಮಲವನ್ನು ಭುಂಜಿಸುತ್ತಾನೆ.

ಮತ್ತಂ, ಕೂರ್ಮಪುರಾಣೇ:—

ಪತ್ರಂ ಪುಷ್ಪಂ ಫಲಂ ತೋಯಮನ್ನಪಾನಾದ್ಯಮೌಷಧಂ
ಲಿಂಗಾರ್ಪಿತಂ ವಿನಾ ಭುಂಕ್ತೇ ಯದಾ ಸ್ವಾದಂಚ ಕಿಲ್ಬಿಷಂ॥

ಭಾವಾರ್ಥ :— ಎಲೆ, ಹೂ, ಹಣ್ಣು, ನೀರು. ಅನ್ನ. ಕುಡಿವ ದ್ರವ್ಯ. ಔಷಧ ಇವುಗಳನ್ನು ಲಿಂಗಕ್ಕೆ ಅರ್ಪಿತವಿಲ್ಲದೆ ಉಣ್ಣುವದು ಮತ್ತು ರುಚಿ ನೋಡುವದು ಕಲ್ಮಷವುಳ್ಳದ್ದು.

ಮತ್ತಂ,

ಸರ್ವತ್ರ ತೃಣಕಾಷ್ಠಂಚ ಭಕ್ಷ್ಯ ಭೋಜ್ಯಾನುಲೇಪನಂ
ಲಿಂಗಾರ್ಪಿತಂ ವಿನಾ ಭುಂಕ್ತೇ ಅನ್ನವಾಹಾರವಿವರ್ಜಿತಂ

ಭಾವಾರ್ಥ:— ಎಲ್ಲಾ ಕಡೆಯಲ್ಲಿಯೂ ತೃಣ ಧಾನ್ಯಗಳನ್ನಾಗಲೀ ಕಟ್ಟಿಗೆ (ಕಾಂಡ) ಗಡ್ಡೆ, ಗೆಣಸುಗಳನ್ನಾಗಲೀ, ತಿಂಬ ಪದಾರ್ಥ ಉಂಬ ಪದಾರ್ಥ ಬಳಿದುಕೊಂಬ ಗಂಧವನ್ನಾಗಲೀ ಲಿಂಗಕ್ಕೆ ಅರ್ಪಿಸಿದಲ್ಲದೆ ಸ್ವೀಕರಿಸಿವರೆ ಅದು ಕೇವಲ ಆಹಾರ ಅನುಲೇಪನವಾಗುವದೇ ಹೊರತು ಪ್ರಸಾದವಾಗುವದಿಲ್ಲ.

ಮತ್ತಂ,

ಅಸಮರ್ಪ್ಯ ಪದಂ ಶಂಭೋ ರ್ಭುಂಕ್ತೇ ಖಾತಿ ಚ ಪಾತಿ ಚ
ಸ ತು ಕೀಟವದಾಹಾರಂ ಭುಂಕ್ತೇ ಖಾತಿ ಚ ಪಾತಿ ಚ

ಭಾವಾರ್ಥ

ಶಂಭುವಿನ ಪಾದಕ್ಕೆ ಸಮರ್ಪಿಸದೆ ಊಟಮಾಡಿ ತಿಂದು ಕುಡಿಯುವವನಾದರೆ ಆತನು ಕ್ರಿಮಿ ಕೀಟಕಗಳಂತೆ ಆಹಾರವನ್ನು ಊಟ ಮಾಡಿ ತಿಂದು ಕುಡಿದವನಾಗುತ್ತಾನೆ.

ವಿಚಾರ

ಪದಾರ್ಥಗಳನ್ನು ಮಹಾದೇವನಿಗೆ ಅರ್ಪಿಸಿ ಪ್ರಸಾದವನ್ನು ಪಡೆವೆನೆಂಬ ಭಾವವು ಆನಂದ ರೂಪವಾಗಿ ಮನಸ್ಸಿನಲ್ಲಿ ತುಂಬಿಕೊಂಡಿರುವದರಿಂದ ಪ್ರಸಾದವುಸುಖಕರವು. ದುಃಖದಿಂದ ಕೂಡಿ ಅನ್ನವನುಣ್ಣುವವನ ಮನವು ದುಃಖಕರವೇ ಆಗುವದು. ಇದರಂತೆ ಜೀವನ ಹಸಿವು ಪರಿಹಾರವಾಗಬೇಕೆಂದು ಉಣ್ಣುವವನ ಆಹಾರವು ಪರಿಣಾಮದಲ್ಲಿ ಜೀವನಾಗಿ ಪರಿಣಮಿಸುವದು. ಅವನು ಮತ್ತೆ ಹುಟ್ಟುವನು. (ಇಲ್ಲಿ ಕುಡಿವ ದ್ರವ್ಯ ಎಂಬುದರಲ್ಲಿ ಟೀ (ಚಾ), ಕಾಫಿ ಮೊದಲಾದವು ಸೇರುತ್ತವೆಯೇನು?.)

ಪ್ರಮಾಣ

ಬ್ರಹ್ಮವಿದ್ಯೋಪನಿಷತ್ ಶ್ಲೋಕ ೩೪–೩೫

ಗುರುವಕ್ತ್ರಾತ್ತು ಲಭ್ಯೇತ ಪ್ರತ್ಯಕ್ಷಂ ಸರ್ವತೋ ಮುಖಂ।
ತಿಲೇಷು ಚ ಯಥಾ ತೈಲಂ ಪುಷ್ಪೇ ಗಂಧ ಇವಾಶ್ರಿತಂ॥
ಪುರುಷಸ್ಯ ಶರೀರೇಸ್ಮಿನ್ ಸ ಬಾಹ್ಯಾಭ್ಯಂತರೇ ತಥಾ।
.... .... .... ....

ಭಾವಾರ್ಥ:—ಗುರುಮುಖದಿಂದ ಸರ್ವತೋ ಮುಖನಾದ ಮಹಾದೇವನನ್ನು ಪ್ರತ್ಯಕ್ಷವಾಗಿ ಹೊಂದಬೇಕು. ಆತನು (ಮಹಾದೇವನು) ಎಳ್ಳಿನಲ್ಲಿ ಎಣ್ಣೆಯೂ, ಹೂವಿನಲ್ಲಿ ಗಂಧವೂ, ಎಲ್ಲಾಕಡೆಯಲ್ಲಿಯೂ ಇರುವಂತೆ ಈ ಮನುಷ್ಯನ ಶರೀರದಲ್ಲಿ ಒಳಗೂ ಹೊರಗೂ ಕೂಡಾ ವ್ಯಾಪಿಸಿರುತ್ತಾನೆ.

ಅದೇ—ಶ್ಲೋಕ. ೩೬

ಜ್ಞಾನೇನ ಜ್ಞೇಯಮಾಲೋಕ್ಯ ಪಶ್ಚಾದ್‌ಜ್ಞಾನಂ ಪರಿತ್ಯಜೇತ್॥

ಭಾವಾರ್ಥ :— ಈ ಜ್ಞಾನದಿಂದ ತಿಳಿಯಲ್ಪಡತಕ್ಕ ಆ ಮಹಾದೇವನನ್ನು ನೋಡಿದಮೇಲೆ ಹಿಂದಿನ ಜ್ಞಾನವನ್ನು ಬಿಡಬೇಕು. ಎಂದರೆ ಆ ಮಹಾದೇವನನ್ನೇ ಕ್ರಿಯೆಗಳಿಂದ ಆಶ್ರಯಿಸಬೇಕು. ಹೀಗೆ ಮಾಡಿದರೆ ಆ ಜ್ಞಾನವು ಸಿದ್ಧಿಸುತ್ತದೆ. ಬರೀಜ್ಞಾನವು ಪ್ರಯೋಜನವಲ್ಲ-

ವಿಚಾರ

ತಾನು ಬ್ರಹ್ಮ ಎಂಬ ಜ್ಞಾನವಮಾತ್ರವಿದ್ದರೆ ಸಾಲದು. ಈ ಜ್ಞಾನವನ್ನು ಹೊಂದಿ ಗುರುಮುಖದಿಂದ ಲಿಂಗವನ್ನು ಪಡೆದರೆ ಆ ಮಹಾದೇವನನ್ನು ನೋಡಿದಂತಾಗುತ್ತದೆ- ಹೀಗಿರುವ ಲಿಂಗದ ಅನುಸಂಧಾನ (ಪೂಜೆ) ಗಳನ್ನು ಬಿಟ್ಟು, ತಾನು ಬ್ರಹ್ಮನೆಂಬ ಭಾವನೆಯಿದ್ದರೆ ಸಾಕು, ಎಂದು ಹೇಳುವದಾದರೆ ತಿಳಿಯತಕ್ಕ ವಸ್ತುವಿನ (ಮಹಾದೇವನ) ಸಾಕ್ಷಾತ್ಕಾರ (ನೋಡುವಿಕೆ) ಇಲ್ಲದುದರಿಂದ ಬರೀಜ್ಞಾನವು ಪ್ರಯೋಜನಕಾರಿಯಾಗುವದಿಲ್ಲ. ಆದ್ದರಿಂದ ಲಿಂಗದ ಪೂಜೆ, ಲಿಂಗಕ್ಕೆ ಅರ್ಪಣ ಇವುಗಳನ್ನು ಬಿಡಬಾರದು.

ಮುಂದಿನ ಪದ್ಯದಲ್ಲಿಯೂ ಇದಕ್ಕೆ ಪ್ರಮಾಣವಿದೆ.

---

೧೨. ಇಷ್ಟ ಲಿಂಗಕೆ ಕೊಡದೆ । ಪ್ರಾಣ ಲಿಂಗಕೆ ಕೊಡುವ
ಭ್ರಷ್ಟ ಭವಿಗಳಿರ,—ಇಷ್ಟಲಿಂಗವ ನೀವು
ಬಿಟ್ಟು ಬಿಡರೇಕೆ ಅಧಮರಿರ

ಬಿಡರಿ+ಏಕೆ=ಬಿಡರೇಕೆ.

### ತಾತ್ಪರ್ಯ

ಲಿಂಗವನ್ನು ಧರಿಸಿಕೊಂಡು ಇದ್ದಾಗ್ಯೂ ಇಷ್ಟಲಿಂಗಕ್ಕೆ ನಾವೇಕೆ ಅರ್ಪಿಸಬೇಕು? ಪ್ರಾಣದಲ್ಲಿ ಇರುವ ಲಿಂಗಕ್ಕೆ ಕೊಟ್ಟರೆ ಆಗದೇ? ಎಂದು ಹೇಳಿ ಅದರಂತೆ ಆಚರಿಸಿ ಲಿಂಗವ್ರತ ತಪ್ಪಿದವರಾಗಿ ಭವದಲ್ಲಿ ಬೀಳುವವರೇ ಕೇಳಿರಿ, ಅಧಮರಿರಾ ನೀವು ಇಷ್ಟಲಿಂಗವನ್ನು ಏಕೆ ಬಿಟ್ಟುಬಿಡರಿ (ಏಕೆ ಬಿಡುವದಿಲ್ಲ)?

### ವಿಚಾರ

ದೇಹ, ಜ್ಞಾನ, ಭಾವ ಎಂಬ ಮನುಷ್ಯನಲ್ಲಿ ಇರುವ ಮೂರು ತನುಗಳಿಗೆ ಇಷ್ಟ, ಪ್ರಾಣ, ಭಾವಗಳೆಂಬ ಮೂರು ಲಿಂಗಗಳು ಇರುತ್ತವೆ. ಇವನು ಉಣ್ಣುವ ಆಹಾರವು ಮೊದಲು ದೇಹವನ್ನು ಬೆಳೆಸುವ ರಕ್ತ ಮಾಂಸಗಳಾಗಿ ಪರಿಣಮಿಸಿ ಮುಂದೆ ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯ ಪದಾರ್ಥಗಳಾಗುವ ಸ್ಥಿತಿಯನ್ನು ಹೊಂದಿರುತ್ತದೆ. ಇಷ್ಟಲಿಂಗಕ್ಕೆ ಕೊಡದೆ ಪ್ರಾಣದಲ್ಲಿ ಇರುವ ಲಿಂಗಕ್ಕೆ ಕೊಡುವೆನು ಎಂದರೆ ಒಳಗೆ ಆತ್ಮನು ಬ್ರಹ್ಮನಾಗಿದ್ದಾನೆ ಅವನಿಗೆ ಕೊಡುವೆನು ಎಂದು ಹೇಳುವದಾದರೆ ಆ ಆಹಾರವು ಒಮ್ಮೆಗೆ ಪ್ರಾಣಲಿಂಗಕ್ಕೆ ಸಲ್ಲುವ ಪದಾರ್ಥವಾಗಿರುವದಿಲ್ಲ. ಇಷ್ಟಲಿಂಗಕ್ಕೆ ರೂಪು, ಪ್ರಾಣ ಲಿಂಗಕ್ಕೆ ರುಚಿ, ಭಾವಲಿಂಗಕ್ಕೆ ತೃಪ್ತಿ ಎಂಬುದಾಗಿ ಪದಾರ್ಥದ ಮೂರು ಭಾಗಗಳನ್ನು ಅರ್ಪಿಸಬೇಕು. ಒಂದು ಪದಾರ್ಥದ ರೂಪವು ಇಷ್ಟಲಿಂಗಕ್ಕೆ ನಿವೇದನವಾದರೆ ರಕ್ತ ಮಾಂಸದೊಳಗೆ ಲಿಂಗಭಾವವು ತುಂಬಿ ಮುಂದೆ ರುಚಿಯು ಎಂದರೆ ಜ್ಞಾನೇಂದ್ರಿಯಗಳಿಗೆ ಸಲ್ಲತಕ್ಕ ಭಾಗವು ಪ್ರಾಣಲಿಂಗಕ್ಕೆ ಅರ್ಪಿಸಲಿಕ್ಕೆ ಸಿದ್ಧವಾಗುತ್ತದೆ. ಮುಂದೆ ಭಾವಲಿಂಗಕ್ಕೆ ಸಲ್ಲುವ ಪ

ರಿಣಾಮ ( ತೃಪ್ತಿ ) ಭಾಗವಾಗಿ ಪರಿಣಮಿಸುತ್ತದೆ. ಹಾಗೆ ಇಷ್ಟಲಿಂಗಕ್ಕೆ ಕೊಡದೆ ಇದ್ದರೆ ಪ್ರಾಣಲಿಂಗಕ್ಕೆ ಸಲ್ಲುವದಿಲ್ಲ. ಆದ್ದರಿಂದ ಅದು ಯಾವ ಲಿಂಗಕ್ಕೂ ಅರ್ಪಿತವಾದಂತೆ ಆಗುವದಿಲ್ಲ. ಹೀಗೆ ಮಾಡಿದವರು ಇತರ ಪ್ರಾಣಿಗಳಂತೆ ಹಸಿವು ತೀರಿಸಿಕೊಂಡವರಾಗಿ ಭವಿಗಳಾಗುತ್ತಾರೆ. ಈ ರೀತಿ ತಪ್ಪಿ ನಡೆವವರು ಇಷ್ಟ ಲಿಂಗನನ್ನು ಕಿತ್ತೊಗೆದು ಭವಿಗಳಂತೆ ಇರುವದೇ ಉತ್ತಮ. ('ಹೇಳುವುದು ವೇದ, ಹಾಕುವುದು ಗಾಣ' ಎಂಬ ಗಾದೆಯಂತೆ ಇರುವದಕ್ಕಿಂತಲೂ 'ನುಡಿಯಂತೆ ನಡೆ, ಎಂಬ ಗಾದೆಯಂತೆ ಇರುವದೇ ಉತ್ತಮವೆಂಬ ಭಾವವು ಇದರಲ್ಲಿ ಸ್ಪಷ್ಟವಾಗಿ ತೋರುತ್ತದೆ.)

## ಪ್ರಮಾಣ

ಸೂಕ್ಷ್ಮಾಗಮ ೭ ನೆಯ ಪಟಲ ೩೭--೩೮ ನೆಯ ಶ್ಲೋಕ.

ಇಷ್ಟಲಿಂಗಂ ಪ್ರಾಣಲಿಂಗಂ ಭಾವ ಲಿಂಗಂಚ ಪಾರ್ವತಿ
ಏಕೀಕೃತ್ಯಾರ್ಚನಂ ಕುರ್ಯಾದ್ ವೀರಶೈವೋ ನ ಭೇದತಃ

ಭಾವಾರ್ಥ:— ವೀರಶೈವನಾದವನು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಲ್ಲಿ ಭೇದಭಾವವನ್ನಿಡದೆ ಒಂದೇಯಾಗಿ ತಿಳಿದು(ಮಾಡಿ)ಪೂಜಿಸಬೇಕು.

## ವಿಚಾರ

ದೇಹವು ಸಾಕಾರವಾಗಿ ಇರುವಂತೆ ಸಾಕಾರನಾದ ಇಷ್ಟಲಿಂಗವನ್ನು ಹಿಡಿದು ಶಿವೋಹಂ ಎಂಬ ಕ್ರಿಯೆಗಳನ್ನು ಆಚರಿಸಿದರೆ ನಿರಾಕಾರನಾದ ಪರಬ್ರಹ್ಮನು ಗೋಚರನಾಗುತ್ತಾನೆಯೇ ಹೊರತು ಕೇವಲನಿರಾಕಾರನೆಂಬ ಭಾವನೆಯಿಂದ ಧ್ಯಾನ ಸ್ತೋತ್ರಗಳನ್ನು ಮಾಡಿದಮಾತ್ರಕ್ಕೆ ಗೋಚರಿಸುವದಿಲ್ಲ.

---

೧೩. ಪತಿಲಿಂಗ ಸತಿ ಶರಣ । ಪತಿಗೆ ಸರ್ವವ ಕೊಡದೆ
ಪತಿ ಪ್ರಾಣ ಲಿಂಗ—ವೆಂದೆಂ ನರರಿಂಗೆ
ಅತಿ ಘೋರ ನರಕವಹುದೆಲವೋ

## ತಾತ್ಪರ್ಯ

ಲಿಂಗವು ಪತಿಯಾಗಿರುವದು, ಶರಣನು ಸತಿಯಾಗಿರುವನು. ಹೆಂಡತಿಯು ಸರ್ವವನ್ನೂ ಗಂಡನಿಗೆ ಮೊದಲು ಅರ್ಪಿಸಬೇಕು. ಪ್ರಾಣಲಿಂಗ ಒಂದೇ ನನಗೆ ಗಂಡನೆಂದು ತಿಳಿದು ಕೊಡುವದರಿಂದ ಕೆಲವು ಭಾಗವನ್ನು ಮಾತ್ರ ಗಂಡನಾದ ಲಿಂಗಮೂರ್ತಿಗೆ ಕೊಟ್ಟಂತೆ ಆಗಿ ಆ ಮನುಷ್ಯನಿಗೆ ಪ್ರಾಣಿಗಳ ಗರ್ಭದಲ್ಲಿ ಬರುವಿಕೆ ಎಂಬ ನರಕವು ಪ್ರಾಪ್ತವಾಗುತ್ತದೆ. (ಇದರಿಂದ ಹೆಂಡತಿಯಾದವಳು ಗಂಡನಿಗೆ ಎಲ್ಲವನ್ನೂ ಕೊಟ್ಟು ಅವನು ಉಂಡು ಉಳಿದ ಶೇಷವನ್ನು ತೆಗೆದುಕೊಳ್ಳಬೇಕೆಂಬ ಲೋಕದ ನೀತಿಯು ವಿಧಾಯಕವಾದ ಕಾರ್ಯವನ್ನು ತಪ್ಪಿ ನಡೆದಂತೆ ಆಗುತ್ತದೆ.)

## ವಿಚಾರ

ಲೋಕದ ಪದಾರ್ಥಗಳಲ್ಲಿ ಕಠಿಣ ದ್ರವ ವಾಯು ಎಂಬ ಮೂರು ರೂಪಗಳು ತೋರುವಂತೆ ನಿರಾಕಾರನಾದ ಶಿವನಲ್ಲಿ ಸಕಲ, ಸಕಲನಿಷ್ಕಲ, ನಿಷ್ಕಲ, ರೂಪಗಳು ಇದ್ದೇ ಇರುವವು ಹೀಗೆ ತೋರುವ ಆ ಮೂರು ರೂಪಗಳಾದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಪದಾರ್ಥಗಳಲ್ಲಿರುವ ರೂಪು ರುಚಿ ತೃಪ್ತಿ ಎಂಬ ಮೂರು ಭಾಗಗಳನ್ನು ಅರ್ಪಿಸಬೇಕು. ರುಚಿಯನ್ನು ಅನುಭವಿಸುವ ಪ್ರಾಣಲಿಂಗವೇ ಪತಿ ಎಂದು ಹೇಳಿದರೆ ರುಚಿಯು ಆಕಾರವಿಲ್ಲದ್ದಾಗಿರುತ್ತದೆ. ರೂಪವಿಲ್ಲದೆ ಅದನ್ನು ಕೊಡಲಿಕ್ಕೆ ಬರುವದಿಲ್ಲ. ಸಾಕಾರವಾದ ರೂಪಿನ ಇಷ್ಟ ಲಿಂಗವನ್ನೇ ಮರೆತರೆ, ಲಿಂಗವು ಪತಿ ಎಂಬ ಭಾವವು ರೂಪದಲ್ಲಿ ಇಲ್ಲದೆ ಹೋಗುವದರಿಂದ ಎಲ್ಲವನ್ನೂ ಮಹಾದೇವನಿಗೆ ಒಪ್ಪಿಸಿದಂತೆ ಆಗುವದಿಲ್ಲ. ರೂಪವು ಲಿಂಗ ಭಾವವನ್ನು ಹೊಂದದೆ ಪ್ರಕೃತಿಯಾಗಿಯೇ ಉಳಿದಿರುವದರಿಂದ ಆವನು ಪ್ರಾಕೃತಿಕನಾಗಿ ಮತ್ತೆ ಹುಟ್ಟುತ್ತಾನೆ. (ಮತ್ತೆ ಗರ್ಭವೆಂಬ ನರಕವು ಒದಗುತ್ತದೆ.)

## ಸಾಕ್ಷಿ

ಪತಿರ್ಲಿಂಗಂ ಸತೀ ಚಾಂಗಮಿತಿ ಪ್ರಾಹುರ್ಮನೀಷಿಣಃ
ಪಂಚೇಂದ್ರಿಯ ಸುಖಂ ನಾಸ್ತಿ ಶರಣಸ್ಥಲ ಮುತ್ತಮಂ॥

ಭಾವಾರ್ಥ:— ಲಿಂಗವು ಪತಿ, ಅಂಗವು ಸತಿ ಎಂಬದಾಗಿ ಬುದ್ಧಿವಂತರು ಹೇಳುತ್ತಾರೆ, ಹೀಗೆ ತಿಳಿದು ನಡೆವವನೇ ಶರಣನು. ಈ ಶರಣನು ತನ್ನ ಅಂಗದಲ್ಲಿರುವ ಪಂಚೇಂದ್ರಿಯ (ಜ್ಞಾನ ಕರ್ಮೇಂದ್ರಿಯ) ಗಳ ಸುಖವನ್ನು ಸರ್ವವನ್ನು ತಾನು ಸತಿಯಾದ್ದರಿಂದ ಆಯಾ ಇಂದ್ರಿಯುಗಳಲ್ಲಿರುವ ತನ್ನ ಪತಿಯಾದ ಲಿಂಗಕ್ಕೆ ಕೊಡುವದರಿಂದ ಈ ಶರಣನಿಗೆ ಯಾವ ಲೌಕಿಕ (ಅಶಾಶ್ವತ) ಸುಖವೂ ಇಲ್ಲ. ಇದೇ ಉತ್ತಮವಾದ ಶರಣಸ್ಥಲ.

ಪ್ರಮಾಣ

ಸೂಕ್ಷ್ಮತಂತ್ರ ೭ನೆಯ ಪಟಲ—೭೧ ನೆಯ ಶ್ಲೋಕ,

ಲಿಂಗಂ ಪತಿಃ ಸತೀಚಾಹಂ ಭಾವೋಯಂ ವೀರಶೈವಿನಾಂ||

ಭಾವಾರ್ಥ :— ಲಿಂಗವು ಪತಿ ನಾನು ಹೆಂಡತಿ ಎಂದು ಶರಣಸ್ಥಲದಲ್ಲಿರುವ ವೀರಶೈವರ ಭಾವನೆಯು.

---

೧೪. ಲಿಂಗವನೆ ಅರ್ಚಿಸಲು | ಲಿಂಗದಲಿ ಫಲ ಪದವು
ಹಿಂಗಿ ಫಲಪದವ,—ಅರ್ಚಿಸಲು ಸಾಕ್ಷಾತು
ಲಿಂಗವೆಯಕ್ಕು ಇದು ಸಹಜ

ತಾತ್ಪರ್ಯ

ಲಿಂಗವನ್ನು ಪೂಜಿಸಿದರೆ ತಪ್ಪದೆ ಫಲಪದವಿ (ಬ್ರಹ್ಮಪದವಿ ಇಂದ್ರಪದವಿ ರಾಜಪದವಿ ಶ್ರೀಮಂತ ಪದವಿ ಮೊದಲಾದವು)ಗಳು ಬರುತ್ತವೆ. ಫಲಗಳನ್ನು ಬಯಸದೆ ಪೂಜಿಸಿದ್ದಾದರೆ ಅವನು ಪ್ರತ್ಯಕ್ಷನಾದ ಲಿಂಗವೇ ಅಗುತ್ತಾನೆ. ಇದು ನಿಜವು.

ವಿಚಾರ

ಲಿಂಗ (ಬ್ರಹ್ಮ) ವು ನಿರಾಕಾರವಾಗಿದ್ದದ್ದು ಸಾಕಾರವಾಗಿ ಬಂದಿದೆ

ಎಂದು ತಿಳಿದು ಪೂಜಿಸುವದಾದರೆ ಪೂಜಿಸುವವನು ಅನ್ಯನಾಗಿ ಉಳಿಯುವ ಕಾರಣದಿಂದ ಆ ಮಹಾದೇವನು ಹಾಗೆ ಪೂಜಿಸಿದವನಿಗೆ ಬೇಡಿದ ಫಲಗಳನ್ನು ಕೊಡುತ್ತಾನೆ. ಲಿಂಗವೇ ತಾನೆಂದೂ ತನ್ನ ಸ್ವರೂಪವೇ ಲಿಂಗವೆಂದೂ ತಿಳಿದು ಪೂಜಿಸಿದರೆ ಅವನು ಲಿಂಗವೇ ಆಗುತ್ತಾನೆ. ಇವುಗಳಲ್ಲಿ ಲಿಂಗವೇ ಆಗುವುದು ಶ್ರೇಷ್ಠವು. ಫಲಗಳನ್ನು ಎಷ್ಟು ಪಡೆದರೂ ಅವು ಶಾಶ್ವತಗಳಲ್ಲ.

ಸಾಕ್ಷಿ

ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಃ ಸದಾಶಿವಃ
ತ್ಯಕ್ತ್ವಾಽಜ್ಞಾನ ನಿರ್ಮಾಲ್ಯಂ ಸೋಹಂ ಭಾವೇನ ಪೂಜಯೇತ್

ಭಾವಾರ್ಥ :— ದೇಹವು ದೇವಾಲಯವೆಂತಲೂ ಜೀವನು ಸದಾಶಿವನೆಂಬ ದೇವನೆಂತಲೂ ಹೇಳಲ್ಪಡುತ್ತದೆ. ಈ ಅಜ್ಞಾನ ನಿರ್ಮಾಲ್ಯವನ್ನು ಬಿಟ್ಟು ಮಹಾದೇವನೇ ನಾನು ಎಂಬ ಭಾವನೆಯಿಂದ ತಾನು (ದೇಹ ಜೀವ ಸಹಿತನಾಗಿ) ಲಿಂಗವಾಗಿ ಲಿಂಗ ಪೂಜೆಯನ್ನು ಮಾಡಬೇಕು.

ಪ್ರಮಾಣ. ೧

ತೇಜೋಬಿಂದೂಪನಿಷತ್ ೫ನೆಯ ಅಧ್ಯಾಯ ಶ್ಲೋಕ ೯೩

ದೇಹೋಹಮಿತಿ ಯದ್ ಜ್ಞಾನಂ ತದೇವಾಜ್ಞಾನಮುಚ್ಯತೇ॥

ಭಾವಾರ್ಥ :— ಈ ದೇಹವೇ ನಾನೆಂದು ಭಾವಿಸುವ ಜ್ಞಾನವು ಅಜ್ಞಾನವೆನಿಸಿಕೊಳ್ಳುತ್ತದೆ.

ಪ್ರಮಾಣ. ೨

ವರಾಹೋಪನಿಷತ್ ೨ನೆಯ ಅಧ್ಯಾಯ ಶ್ಲೋಕ. ೨೯,

ಯಃ ಶರೀರೇಂದ್ರಿಯಾದಿಭ್ಯೋ ವಿಹೀನಂ ಸರ್ವ ಸಾಕ್ಷಿಣಂ
ಪರಮಾರ್ಥೈಕ ವಿಜ್ಞಾನಂ ಸುಖಾತ್ಮಾನಂ ಸ್ವಯಂ ಪ್ರಭುಂ
ಸ್ವ ಸ್ವರೂಪತಯಾ ಸರ್ವಂ ವೇದ ಸ್ವಾನುಭವೇನ ಯಃ
ಸ ಧೀರಃ ಸ ತು ವಿಜ್ಞೇಯಃ ಸೋಹಂ ತ್ವತ್ತ್ವಂ ಋಭೋ ಭವ

ಭಾವಾರ್ಥ :— ಋಭುವೆಂಬ ಯೋಗಿಗೆ ವರಾಹನು ಬೋಧಿಸುತ್ತಾನೆ. ಎಲೈ ಋಭುವೇ, ಶರೀರ ಇಂದ್ರಿಯಗಳಿಲ್ಲದ, ಎಲ್ಲಕ್ಕೂ ಸಾಕ್ಷಿಯಾದ, ಪರಮಾರ್ಥದಿಂದ ಮಾತ್ರವೇ ತಿಳಿಯಲ್ಪಡುವವನಾದ, ಸುಖಾತ್ಮನಾದ ಸ್ವಯಂಜ್ಯೋತಿ ಸ್ವರೂಪನಾದ ಪರವಸ್ತುವನ್ನು ತನ್ನ ಅನುಭಾವದಿಂದ ತನ್ನ (ದೇಹ ಮತ್ತು ಇಂದ್ರಿಯಾದಿಗಳ) ಸ್ವರೂಪವಾಗಿ ಯಾವನು ತಿಳಿಯುತ್ತಿನೆಯೋ ಆವನೇ ವೀರನು ಎಂದು ತಿಳಿಯಬೇಕು. ನೀನು ಅಂಥಾ ಸೋಹಂ ತತ್ತ್ವವುಳ್ಳವನಾಗು.

ಪ್ರಮಾಣ ೩

ಪಾರಮೇಶ್ವರಾಗಮ ೧೧ನೆಯ ಪಟಲ ಶ್ಲೋಕ ೫೮–೬೦

ಶಿವೋಹಂ ಭಾವನಾ ಧೀರೋ ವೀರಶೈವ ಉದಾಹೃತಃ॥
ವೀರಶೈವ ಮತಂ ಪ್ರಾಪ್ಯ ಜಗದೇತಚ್ಚರಾಚರಂ ॥
ಸರ್ವಂ ಶಿವಮಯಂ ಧ್ಯಾಯೇತ್ ಶಿವೋಹಮಿತಿ ಭಾವಯೇತ್॥

ಭಾವಾರ್ಥ:— (ಶಿವೋಹಂ = ಶಿವನುನಾನು) ಎಂಬ ಭಾವನೆಯುಳ್ಳ ಧೀರನಿಗೆ ವೀರಶೈವನೆಂದು ಕರೆಯುತ್ತಾರೆ. ಇಂಥಾ ವೀರಶೈವ ಮತವನ್ನು ಹೊಂದಿ ಈ ಚರಾಚರ (ಸ್ಥಾವರ ಜಂಗಮಾತ್ಮಕ) ವಾದ ಜಗತ್ತನ್ನು ಸರ್ವವನ್ನೂ ಶಿವಮಯವೆಂದು ಲಿಂಗದಲ್ಲಿ ಧ್ಯಾನಿಸಬೇಕು. ಶಿವೋಹಂ (ನಾನುಶಿವನು) ಎಂದೂ ತಿಳಿಯಬೇಕು.

ಪ್ರಮಾಣ ೪

ಜಾಬಾಲ ದರ್ಶನ ೬ನೆಯ ಖಂಡ

ಜ್ಞಾನಸ್ವರೂಪಮೇವಾಹುರ್ಜಗದೇತದ್ ವಿಲಕ್ಷಣಂ॥
ಅರ್ಥಸ್ವರೂಪಮಜ್ಞಾನಾತ್ ಪಶ್ಯಂತ್ಯನ್ಯೇ ಕು ದೃಷ್ಟಯಃ

ಭಾವಾರ್ಥ :— ಈ ತೋರುವ ಜಗತ್ತನ್ನು ಜ್ಞಾನ ಸ್ವರೂಪವಾಗಿಯೇ ಹೇಳುತ್ತಾರೆ. ಅಜ್ಞಾನದಿಂದ ಇದನ್ನು ವಿಲಕ್ಷಣವಾದ ಅರ್ಥ ಸ್ವ

ರೂಪ (ಜಡವಾದ ದ್ರವ್ಯ ಸ್ವರೂಪ) ವೆಂದು ಕೆಟ್ಟ ದೃಷ್ಟಿಯುಳ್ಳ ಕೆಲ ವರು ನೋಡುತ್ತಾರೆ.

(ಈ ಪ್ರಮಾಣಗಳಲ್ಲಿ ಉಪನಿಷತ್ತುಗಳ ಅಭಿಪ್ರಾಯಕ್ಕೂ ಆಗ ಮದ ಅಭಿಪ್ರಾಯಕ್ಕೂ ಏನು ವ್ಯತ್ಯಾಸವಿದೆ?)

---

೧೫. ಕಲ್ಪಿಸಿದ ಫಲಗಳನು | ಕಲ್ಪತರುವೀವಂತೆ
ಕಲ್ಪಿಸಿ ಮಾಡೆ—ಕೊಡುವುದೈ ಪದವ ನಿಃ
ಕಲ್ಪಿತರಂಗಿಲ್ಲ ಫಲ ಪದವು.

## ತಾತ್ಪರ್ಯ

ಕಲ್ಪವೃಕ್ಷವು ಮನುಷ್ಯನು ಕಲ್ಪಿಸಿದ ಫಲಗಳನ್ನು ಕೊಡುತ್ತದೆ. ಹಾಗೆಯೇ ಮನುಷ್ಯನು ತನಗಿಂತ ಪರವಸ್ತುವು ಬೇರೆ ಇರುವದೆಂದು ಕಲ್ಪಿಸಿ, ಪೂಜಾದಿಗಳನ್ನುಮಾಡಿ ಫಲವು ಬೇಕೆಂದು ಕಲ್ಪಿಸಿದರೆ ಲಿಂಗವು ಫಲಪದವನ್ನು ಕೊಡುತ್ತದೆ, ಹಾಗೆ ಕಲ್ಪಿಸುವಿಕೆ ಇಲ್ಲದೆ ತಾನೇ ಶಿವನೆಂದು ಪೂಜಿಸುವವರಿಗೆ ಫಲಪದವು ಇಲ್ಲ.

## ಪ್ರಮಾಣ

ಪಾರಮೇಶ್ವರಾಗಮ, ೧೨ನೆಯ ಪಟಲ, ಶ್ಲೋಕ ೧೫–೧೬

ಅನ್ಯಾತ್ಮ ವಿದಿತಂ ಬಾಹ್ಯಂ ಬಾಹ್ಯಮಭ್ಯರ್ಚನಾದಿಕಂ
ತದೇವ ತು ಸ್ವ ಸಂವೇದ್ಯಂ ನ ಮನೋ ಮಾತ್ರ ಮುಚ್ಯತೇ

## ಭಾವಾರ್ಥ

ಮಹಾದೇವನನ್ನು ತನಗಿಂತ ಭಿನ್ನಾತ್ಮನಾಗಿ ತಿಳಿವುದು ಬಾಹ್ಯ ವೆನಿಸಿಕೊಳ್ಳುತ್ತದೆ. ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜಿಸುವದೂ ಬಾಹ್ಯವೇ. ಹೀಗೆ ತಿಳಿದು ಪೂಜಿಸಿದರೆ ಫಲ ಪದ ವನ್ನು ಕೊಡುತ್ತಾನೆ. ಅದೇ ಮಹಾದೇವನನ್ನು ತನ್ನಲ್ಲಿ ಇದ್ದಾನೆ, ಎಂದು ಭಾವಿಸಬೇಕು. ಆದರೆ ಮನಸ್ಸಿನಲ್ಲಿ ಮಾತ್ರ ಇದ್ದಾನೆ, ಎಂದು ಭಾವಿಸಿದರೆ ಸಾಲದು. ತನ್ನ ಭಾವ ಮೊದ ಲಾಗಿ ಸರ್ವಕಡೆಗಳಲ್ಲಿಯೂ ಇದ್ದಾನೆಂದು ಭಾವಿಸಬೇಕು.

೧೬. ಚಿಂತಿಸುತ ಬೇಡಿದಡೆ | ಚಿಂತಾಮಣಿ ಈವಂತೆ
ಚಿಂತಿಸಿ ಮಾಡೆ,---ಕೊಡುವುದೈ ಫಲವ ನಿ
ಶ್ಚಿಂತಕರಿಗಿಲ್ಲ ಫಲ ಪದವು.

ತಾತ್ಪರ್ಯ

ಫಲವು ಬೇಕೆಂದು ಚಿಂತಿಸುತ್ತಾ ಬೇಡಿದರೆ ಚಿಂತಾಮಣಿಯು ಕೊಡುತ್ತದೆ. ಅದರಂತೆ ಮಹಾದೇವನು ಅಸ್ಯನಾಗಿರುವನೆಂದು ತಿಳಿದು ಲಿಂಗ ಪೂಜೆಯನ್ನು ಮಾಡಿದರೆ ಚಿಂತಿಸಿ ಬೇಡಿದ ಪದವಿಯನ್ನು ಶಿವನು ಕೊಡುತ್ತಾನೆ. ಅಂಥಾ ಚಿಂತನೆ ಏನೂ ಇಲ್ಲದವರಿಗೆ ಫಲ ಪದವಿಯು ಇಲ್ಲ.

ವಿಚಾರ

೧೫ ನೆಯ ಪದ್ಯದ ವಿಚಾರದ ಅಭಿಪ್ರಾಯವೇ ಇದಕ್ಕೂ ಅನ್ವಯಿಸುತ್ತದೆ

---

೧೭. ಕಾಮಿಸಿದ ವಸ್ತುವನು | ಕಾಮದುಘೆ ಈವಂತೆ
ಕಾಮಿಸುತ ಮಾಡೆ—ಕೊಡುವುದೈ ಫಲವ ನಿಃ
ಕಾಮಿಗಳಿಗಿಲ್ಲ ಫಲಪದವು.

ತಾತ್ಪರ್ಯ

ಮನುಷ್ಯನು ಕಾಮಿಸಿದ ವಸ್ತುಗಳನ್ನು ಕಾಮಧೇನುವೆಂಬ ಆಕಳು (ಗೋವು) ಕೊಡುವಹಾಗೆ, ಯಾವ ಫಲಗಳು ಬೇಕೆಂಬ ಇಚ್ಛೆಯುಂಟೋ ಆ ಫಲಗಳನ್ನು ಅಪೇಕ್ಷಿಸಿ ಲಿಂಗ ಪೂಜೆಯನ್ನು ಮಾಡಿದರೆ ಲಿಂಗವು ಆ ಫಲಗಳನ್ನು ಕೊಡುತ್ತದೆ. ಇಂಥಾ ಫಲಗಳನ್ನು ನಿಷ್ಕಾಮಿಗಳು ಬೇಡುವದಿಲ್ಲ, ಆದ್ದರಿಂದ ಅವರಿಗೆ ಫಲಪದವಿ ಇಲ್ಲ.

## ಪ್ರಮಾಣ. ೧

### ಭಗವದ್ಗೀತೆ ೨ನೇಯ ಅಧ್ಯಾಯ ಶ್ಲೋಕ ೪೩.

ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮ ಫಲಪ್ರದಾಂ
ಕ್ರಿಯಾವಿಶೇಷ ಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ

### ಭಾವಾರ್ಥ

ಫಲದ ಅಪೇಕ್ಷೆಯುಳ್ಳ ಮನುಷ್ಯರು, ತಿರುಗಿ ಹುಟ್ಟುವ ಕರ್ಮಫಲವನ್ನು ಕೊಡತಕ್ಕ, ವಿಶೇಷಕ್ರಿಯೆಗಳು ಬಹಳವಾಗಿರತಕ್ಕ, ಸುಖ, ಮತ್ತು ಐಶ್ವರ್ಯದ ಗಮನವುಳ್ಳವರಾಗಿ. ಸ್ವರ್ಗಕ್ಕೆ ಹೋಗತಕ್ಕವರಾಗಿದ್ದಾರೆ. (ಇಲ್ಲಿ ಸ್ವರ್ಗಕ್ಕೆ ಹೋದರೂ ಮರಳಿ ಹುಟ್ಟುತ್ತಾರೆಂಬ ಅಭಿಪ್ರಾಯವಿದೆ.)

## ಪ್ರಮಾಣ ೨

### ಅಮೃತ ಬಿಂದೂಪನಿಷತ್ ಶ್ಲೋಕ ೧.

ಮನೋ ಹಿ ದ್ವಿವಿಧಂ ಪ್ರೋಕ್ತಂ ಶುದ್ಧಂ ಚಾಶುದ್ಧಮೇವಚ
ಅಶುದ್ಧಂ ಕಾಮ ಸಂಕಲ್ಪಂ ಶುದ್ಧಂ ಕಾಮ ವಿವರ್ಜಿತಂ

ಭಾವಾರ್ಥ :— ಮನಸ್ಸು ಎರಡು ವಿಧ, ಶುದ್ಧ, ಅಶುದ್ಧ, ಎಂಬದಾಗಿ. ಫಲದ ಅಪೇಕ್ಷೆಯ ಸಂಕಲ್ಪವುಳ್ಳದ್ದು ಅಶುದ್ಧವು, ಫಲಾಪೇಕ್ಷೆಯಿಲ್ಲದ್ದು ಶುದ್ಧವು.

### ವಿಚಾರ.

ಒಂದು ಮಾವಿನ ಗಿಡವನ್ನು ಬೆಳೆಯಿಸಿ, ನನಗೆ ಫಲವು ಬೇಡವೆಂದರೂ ಅದು ಫಲವನ್ನು ಕೊಟ್ಟೇ ಕೊಡುತ್ತದೆ. ಅದರಂತೆ ಕರ್ಮಗಳನ್ನು ಮಾಡಿ ಫಲಗಳನ್ನು ಬೇಡದೆ ಇದ್ದರೂ ಮಹಾದೇವನು ಫಲವನ್ನು ಕೊಡುತ್ತಾನೆ. ಫಲವನ್ನು ಬೇಡದೆ ಕರ್ಮ ಮಾಡುವವರಿಗೆ ಅವನು ಕೊಡುವ ಅತ್ಯಂತ ಶ್ರೇಷ್ಠವಾದ ಫಲವೇ ಜ್ಞಾನವು. ಜ್ಞಾನವೆಂದರೆ ತಾನು ಬ್ರಹ್ಮನೆಂದು ತಿಳಿವುದು. ಇದಿಲ್ಲದೆ ಇರುವ ಜ್ಞಾನವು ಎಷ್ಟು ಲೌಕಿಕ ಪ್ರಯೋಜನವುಳ್ಳದ್ದಾದರೂ ಅದೂ ಅಜ್ಞಾನ

ವೆಂದೇ ಪೂರ್ವಿಕರ ಭಾವನೆ.
(೧೪ ನೆಯ ಪದ್ಯದ ವಿಚಾರದಲ್ಲಿ ಇದಕ್ಕೆ ಪ್ರಮಾಣ ಶ್ಲೋಕವಿರುತ್ತದೆ.

---

೧೮. ಭಕ್ತಂಗೆ ಭವವಿಲ್ಲ | ಭವಿಗೆ ಭಕ್ತಿಯಿಲ್ಲ
ಪ.ತ್ರೆ ವಾಗ್ ಬ್ರಹ್ಮ—ವನು ನುಡಿದು ಭವಭವದಿ
ಸುತ್ತುತ್ತಲಿಹನು ವಾಗ್ ಬ್ರಹ್ಮಿ

ತಾತ್ಪರ್ಯ

ಭಕ್ತಿಯುಳ್ಳವನಿಗೆ ತಿರುತಿರುಗಿ ಹುಟ್ಟಿ ಬರುವಿಕೆಯು ಸಂಭವವಿರುವದಿಲ್ಲ. ತಿರುತಿರುಗಿ ಹುಟ್ಟಿ ಬರುವವನಿಗೆ ಲಿಂಗ ಸಮರಸಭಕ್ತಿಯು ಉಂಟಾಗುವದಿಲ್ಲ. ಮಾತಿನಲ್ಲಿ ಬ್ರಹ್ಮನಾದೆನೆಂದು ನುಡಿವ ಮಾತಿನ ಬ್ರಹ್ಮಿಯು ಲಿಂಗದಲ್ಲಿ ಭಕ್ತಿಯಿಡುವ ಆ ನಡತೆಯನ್ನು ತಿಳಿಯದೆ ಜನ್ಮ ಜನ್ಮದಲ್ಲಿ ಸುತ್ತುತ್ತಾ ಇರುವನು.

ಪ್ರಮಾಣ

ಪಾರಮೇಶ್ವರಾಗಮ, ೮ ನೆಯ ಪಟಲ ಶ್ಲೋಕ ೮೨.

ನ ಹಿ ಕಲ್ಯಾಣ ಕೃತ್ ಕಶ್ಚಿತ್ ದುರ್ಗತಿಂ ದೇವಿ ಗಚ್ಛತಿ
ಧೃತ್ವಾ ಲಿಂಗಂ ಮಮ ಶಿವೇ ಕಥಂ ಯಾಸ್ಯತಿ ರೌರವಂ
(ಇದರಲ್ಲಿನ ಮೊದಲಿನ ಅರ್ಧ ಶ್ಲೋಕವು ಭಗವದ್ಗೀತೆಯಲ್ಲಿ ಇದೆ. ಆದರೆ ಅದರಲ್ಲಿ 'ದೇವಿ' ಎಂಬ ಪದದ ಬದಲಾಗಿ 'ತಾತ' ಎಂದಿರುತ್ತದೆ.)

ಭಾವಾರ್ಥ:— ಶಿವನು ಪಾರ್ವತಿಗೆ ಹೇಳುತ್ತಾನೆ.:—

ಕಲ್ಯಾಣ (ಶುಭ) ವನ್ನು ಮಾಡುವ ಯಾವನಾದರೂ ಕೆಟ್ಟ ಫಲವನ್ನು ಹೊಂದುವ ಮುಂದಿನ ಗತಿಯನ್ನು ಪಡೆಯುವದಿಲ್ಲ. ಪಾರ್ವತಿಯೇ, ಶಿವಸ್ವರೂಪವಾದ ಲಿಂಗವನ್ನು ಧರಿಸಿ ನರಕಕ್ಕೆ ಹೇಗೆ ಹೋಗುತ್ತಾನೆ?

ವಿಚಾರ

'ಲಿಂಗ' ಶಬ್ದದ ಉತ್ಪತ್ತಿಯು 'ಲಯಂಗಮನಾಲ್ಲಿಂಗಂ' ಎಂಬದಾಗಿ ಆಗಿದೆ ಆ ಪ್ರಕಾರ ಈ ಜಗತ್ತಿನ ತೋರುವಿಕೆಯೂ, ಕಾಣದಿರುವಿಕೆಯೂ, ಯಾವುದರಲ್ಲಿ ಆಗುವುದೋ ಅದು ಲಿಂಗವು ಎಂದಾಗುತ್ತದೆ. ಆದ್ದರಿಂದ ಲಿಂಗಕ್ಕೆ ಶಿವ, ಬ್ರಹ್ಮ ಎಂದು ಕರೆದಿರುತ್ತಾರೆ. ಇಂಥಾ ಶಿವನ ಸ್ವರೂಪವೇ ಆದ ಲಿಂಗಧಾರಿಯು ತಿರುಗಿ ಹುಟ್ಟುವುದು ಹೇಗೆ?

---

೧೯. ಅಂಗವದು ಮಾಲಿನ್ಯ | ಲಿಂಗವದು ನಿರ್ಮಲವು
ಲಿಂಗಾಂಗ ಕೆಣೆಯು ೧ — ಇಲ್ಲೆಂಬ ಸಂದೇಹಿ
ಜಂಗುಳಿಗೆ ಅಹುದು ಭವತಾನು
೧ ಕೇಶ ಎಂಬೂ ಇದೆ.

ತಾತ್ಪರ್ಯ

ದೇಹವು ಮಲಿನದೊಡನೆ ಕೂಡಿರುವದು, ಲಿಂಗವು ಮಲರಹಿತವಾದದ್ದು, ಆದ್ದರಿಂದ ಲಿಂಗ, ಅಂಗ, ಈ ಎರಡಕ್ಕೂ ಕೂಡುವಿಕೆಯು ಇಲ್ಲವೆಂದು ಹೇಳುವ, ಸಂಶಯದೊಡನೆ ಕೂಡಿರುವ ಪಶುಗಳ ಗುಂಪಿಗೆ ಮತ್ತೆ ಹುಟ್ಟಿ ಬರುವಿಕೆಯು ಉಂಟಾಗುತ್ತದೆ.

ಸಾಕ್ಷಿ

ಅಂಗಂ ಚ ಮಲಿನಂ ಪ್ರೋಕ್ತಂ | ಲಿಂಗಂ ನಿರ್ಮಲಮೇವಚ
ಅಂಗೇ ಚ ಲಿಂಗ ಸಂಬಂಧಂ ವಿಶೇಷಂ ಪಾತಕಂ ಭವೇತ್

ಭಾವಾರ್ಥ:— ದೇಹವು ಮಲಿನವೆಂತಲೂ ಲಿಂಗವು ನಿರ್ಮಲವೆಂತಲೂ ಹೇಳಲ್ಪಟ್ಟಿರುತ್ತದೆ. ಆದ್ದರಿಂದ ಲಿಂಗವನ್ನು ಬೇರೆಯಾಗಿ ತಿಳಿದು ಪೂಜಿಸಬೇಕು. ಅಂಗದಲ್ಲಿ ಲಿಂಗ ಸಂಬಂಧ ಮಾಡುವದು ವಿಶೇಷ ಪಾಪಕಾರ್ಯವಾಗುತ್ತದೆ.

(ಸಂದೇಹವುಳ್ಳವರ ಅಭಿಪ್ರಾಯವಿದು.)

## ವಿಚಾರ

ಶಿವ ಸಿದ್ಧಾಂತ ಮತದವರು ಲಿಂಗವನ್ನು ನಿರಾಕಾರ ಬ್ರಹ್ಮವೆಂದು ತಿಳಿದು ಪೂಜಿಸುತ್ತಾರೆ. ಇವರು ಲಿಂಗವನ್ನು ಬೇರೆಇಟ್ಟುಕೊಂಡಿರುತ್ತಾರೆ. ಮತ್ತು ಅನಿಯತವಾಗಿ ಧಾರಣಮಾಡಿಕೊಂಡೂ ಇರುತ್ತಾರೆ. ಇವರಿಗೆ ಜ್ಞಾನಶೈವರೆಂತಲೂ, ಪಾಶುಪತರೆಂತಲೂ, ಕರೆಯುತ್ತಾರೆ. ಇಂಥಾ ಲಿಂಗ ಧಾರಿಗಳ ವಿಷಯವೂ ಆಗಮಗಳಲ್ಲಿ ಬರೆಯಲ್ಪಟ್ಟಿರುತ್ತದೆ. ಆದರೆ ವೀರಶೈವವು ಇವರಂತೆ ಭಾವಿಸುವದಿಲ್ಲ. ಅಂಗವೂ, ಲಿಂಗವೂ, ಒಂದೇ ಎಂದು ಭಾವಿಸುವ ಆಚರಣೆಯುಳ್ಳದ್ದಾಗಿದೆ. ಈ ಭಾವನೆ ಮತ್ತು ಆಚರಣೆ ಇಲ್ಲದಿದ್ದರೆ ಅದ್ವೈತವು ಸಿದ್ಧಿಸುವದಿಲ್ಲ. ಮತ್ತು

೧೪ ನೆಯ ಪದ್ಯದ ಸಾಕ್ಷಿಯಲ್ಲಿ ಕೊಡಲ್ಪಟ್ಟಿರುವ ಅಜ್ಞಾನ ನಿರ್ಮಾಲ್ಯದ ವಿಷಯವು ಇದರಲ್ಲಿ ಚನ್ನಾಗಿ ವಿವರಿಸಲ್ಪಟ್ಟದೆ. ಅಂಗವು ಮಲಿನ (ಅಥವಾ ದೇವಾಲಯು) ಲಿಂಗವು ನಿರ್ಮಲ ಎಂದು ಭಾವಿಸಿ ಲಿಂಗ ಪೂಜೆಮಾಡಿ, ನೈವೇದ್ಯವ ಮಾಡಿದರೆ ಅದು ನಿರ್ಮಾಲ್ಯವೆನಿಸಿಕೊಳ್ಳುತ್ತದೆ. ಇಂಥಾ ನಿರ್ಮಾಲ್ಯವನ್ನು ಅಪೇಕ್ಷಿಸುವುದು ಅಜ್ಞಾನವು. ಆದ್ದರಿಂದ ದೇಹವೂ ಲಿಂಗ ಸ್ವರೂಪವೆಂದೇ ತಿಳಿದು ಲಿಂಗ ಪೂಜೆಮಾಡಿ ಪ್ರಸಾದವನ್ನು ಪಡೆಯಬೇಕು. ಇದೇ ಶ್ರೇಷ್ಠವು-

### ಪ್ರಮಾಣ ೧

ಪಾರಮೇಶ್ವರಾಗಮ ಪಟಲ ೮, ಶ್ಲೋಕ ೭೦-೭೩,

ಸರ್ವೋತ್ತಮಾ ಹಿ ಮನುಜಾಸ್ತತ್ರ ವಿಪ್ರಾ ಮಹೋತ್ತಮಾಃ
ವೇದಿನಃ ಕರ್ಮಕರ್ತಾರಸ್ತದರ್ಥಜ್ಞಾ ವಿಶೇಷತಃ
ತತೋ ವೇದಾಂತ ಸಾರಜ್ಞಾಸ್ತತಃ ಸನ್ಯಾಸಿನಃ ಪರಾಃ
ತತಃ ಪಾಶುಪತಾಃ ಶ್ರೇಷ್ಠಾ ಲಿಂಗಿನಸ್ತು ತತೋಧಿಕಾಃ
ತತೋಧಿಕಾ ಮಹಾಶ್ರೇಷ್ಠಾ ವೀರ ಮಾಹೇಶ್ವರಾಃ ಶಿವೇ
ನ ತೇಭ್ಯೋಽಪ್ಯಧಿಕಃ ಕಶ್ಚಿದ್ವೀರಶೈವಾಶ್ರಮಾತ್ ಪರಃ

ಭಾವಾರ್ಥ:— ಶಿವನು ಪಾರ್ವತಿಗೆ ಹೇಳುತ್ತಾನೆ :–

ಲೋಕದ ಪ್ರಾಣಿಗಳಲ್ಲಿ ಸರ್ವೋತ್ತಮರೇ ಮನುಷ್ಯರು, ಅವರಲ್ಲಿ

ಬ್ರಾಹ್ಮಣರು ಬಹಳ ಉತ್ತಮರು, ಅವರಲ್ಲಿ ಕರ್ಮವಾಡುವ ವೈದಿಕರು ಉತ್ತಮರು, ಅವರಲ್ಲಿ ವೇದದ ಅರ್ಥವನ್ನು ತಿಳಿದವರು ವಿಶೇಷ ಉತ್ತಮರು, ಅವರಿಗಿಂತ ವೇದಾಂತದ ಸಾರವನ್ನು ತಿಳಿದವರು ಉತ್ತಮರು, ಅವರಿಗಿಂತ ಸನ್ಯಾಸಿಗಳು ಉತ್ತಮರು, ಅವರಿಗಿಂತ ಪಾಶುಪತರು ಶ್ರೇಷ್ಠರು, ಅವರಿಗಿಂತ ಲಿಂಗವಂತರು ಅಧಿಕರು, ಅವರಿಗಿಂತ ವೀರ ಮಾಹೇಶ್ವರರು ಮಹಾ ಶ್ರೇಷ್ಠರು, ಈ ವೀರಶೈವಾಶ್ರಮವನ್ನು ಹೊಂದಿದವರಿಗಿಂತಲೂ ಅಧಿಕರಾದವರು ಯಾರೂ ಇಲ್ಲ. (ಇಲ್ಲಿ ವೀರಮಾಹೇಶ್ವರ ವೀರಶೈವ ಈ ಎರಡು ಪದಗಳೂ ಒಂದೇ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತವೆ.)

ಪ್ರಮಾಣ ೨

ತೇಜೋ ಬಿಂದೂಪನಿಷತ್ ೫ನೆಯ ಅಧ್ಯಾಯ,

ದೇಹೋಹಮಿತಿ ಸಂಕಲ್ಪಸ್ತದ್ದುಃಖಮಿತಿ ಪ್ರೋಚ್ಯತೇ

ಭಾವಾರ್ಥ:- ದೇಹವೇ ನಾನು ಎಂಬದಾಗಿ ಯೋಚಿಸುವದೇ ದುಃಖವು

---

೨೦. ಲಿಂಗ ಪ್ರಾಣವು ತನಗೆ | ತಾನೇ ಲಿಂಗ ಪ್ರಾಣಿ
ಲಿಂಗಾಂಗ ತನಗೆ,—ತಾನೇ ಲಿಂಗಾಂಗ ವೆಂ
ಬಿಂಗಿತವ ನರಿಯದವ ಭವಿಯು

ತಾತ್ಪರ್ಯ

ತನಗೆ ಲಿಂಗದ ಪ್ರಾಣವುಂಟು, ಆದರೆ ಜೀವಿಗಳಿಗೆ ಇರುವಂಥ ಪ್ರಾಣವಲ್ಲ, ತಾನೇ ಲಿಂಗಕ್ಕೆ ಪ್ರಾಣಸ್ವರೂಪನಾಗಿ ಇರುವವನು, ತನಗೆ ಲಿಂಗದ ಅಂಗಗಳು ಇವೆ, ತಾನೇ ಲಿಂಗಕ್ಕೆ ಅಂಗ ಹೀಗೆನ್ನುವ ಮರ್ಮವನ್ನು ತಿಳಿಯದೆ ಇರುವವನು ಭವಿಯು (ಜನ್ಮಕ್ಕೆ ಬರತಕ್ಕವನು).

ಸಾಕ್ಷಿ

ಅಹಂ ಮಾಹೇಶ್ವರ ಪ್ರಾಣೋ ಮಮ ಪ್ರಾಣೋ ಮಹೇಶ್ವರಃ
ತಸ್ಮಾದವಿರಳಂ ನಿತ್ಯಂ ಶರಣಂ ನಾಮ ವರ್ತತೇ

ನಾನು ಮಹೇಶ್ವರನ ಪ್ರಾಣವು, ನನಗೆ ಪ್ರಾಣವು ಮಹೇಶ್ವರನು ಹೀಗೆ ಅವಿರಳ (ಭಿನ್ನವಿಲ್ಲದ) ಸ್ವರೂಪ ಮತ್ತು ನಿತ್ಯ (ಕೇಡಿಲ್ಲದ) ಸ್ವರೂಪನಾದುದರಿಂದ, 'ಶರಣ' ಎಂಬ ಹೆಸರು ಬಂದಿರುತ್ತದೆ.

ವಿಚಾರ

ತಾನು ಬ್ರಹ್ಮ (ಲಿಂಗ) ನಾದಮೇಲೆ ತನ್ನ ಅಂಗ ಪ್ರಾಣ ಮೊದಲಾದವುಗಳೆಲ್ಲಾ ಆ ನಿರಾಕಾರ ಬ್ರಹ್ಮನಿಗೆ ಸೇರಿದವುಗಳಾಗಿ ಇರುವದರಿಂದ ಸರ್ವವೂ ಬ್ರಹ್ಮ (ಲಿಂಗ) ವೇ ಹೊರತಾಗಿ ತಾನಿಲ್ಲ. ಹೀಗೆ ತಿಳಿವುದರಿಂದ ಮನುಷ್ಯನಿಗೆ ಅಹಂಕಾರ (ನಾನು ಎಂಬುದು) ಮಮಕಾರ (ನನ್ನದು ಎಂಬುದು) ಇವುಗಳು ಅಡಗುತ್ತವೆ.

---

೨೧. ಹಾವ ಬೇಡಲು ಸುತಗೆ | ಈವಳೇ? ನಿಜಮಾತೆ
ಭಾವಜಹರನು,—ನಿಜದಂಗ ಭಕ್ತಂಗೆ
ಈವನೇ? ಬೇಡೆ ಫಲ ಪದವ

ತಾತ್ಪರ್ಯ

ಹಾವನ್ನು ಬೇಡಿದರೆ ಮಗನಿಗೆ ತಾಯಿಯು ಕೊಡುತ್ತಾಳೇನು? ಮಹಾದೇವನು ತನ್ನ ಅಂಗನಾಗಿರುವ ಭಕ್ತನಿಗೆ ಫಲ ರೂಪವಾಗಿರುವ ಇಂದ್ರ ಪದವಿ ಮೊದಲಾದ ಪದವಿಗಳನ್ನು ಕೊಡುತ್ತಾನೇನು?

ವಿಚಾರ

ಹಾವು ಕಚ್ಚುತ್ತದೆ ಎಂಬ ತಿಳಿವು ಉಳ್ಳವಳಾದ್ದರಿಂದ ತನ್ನ ಕೂಸು ಹಾವನ್ನು ಬೇಡಿದರೆ ತಾಯಿಯು ಕೊಡುವದಿಲ್ಲ. ಇದರಂತೆ ಶಿವನ ದೇಹವೇ ಭಕ್ತನ ರೂಪವಾಗಿರುವಾಗ ಬೇರೆ ಫಲವುಳ್ಳ ಪದವಿಗಳನ್ನು ಬೇಡಿದರೆ, ಅವು ಮುಂದೆ ಇವನನ್ನು ಕರ್ಮದ ಬಂಧದಲ್ಲಿ ಸಿಕ್ಕಿಸಿ ಪುನಃ ಹುಟ್ಟಿಸುವದಕ್ಕಾಗಿ ಈಗ ಕೊಲ್ಲುತ್ತವೆ ಎಂಬುದನ್ನು ಶಿವನು ಬಲ್ಲವನಾದ್ದರಿಂದ ಫಲಪದವಿಗಳನ್ನು ಕೊಡುವದಿಲ್ಲ.

---

೨೨. ಕಡಲೆ ಮೆಲ್ವನ ಕೈಗೆ | ಕೊಡಲುಂಟೆ? ಉದಕವನು
ಕಡಲ ಧರಿಸಿದನ,—ಸಮರಸದಿ ಭಜಿಪಂಗೆ
ಕೊಡಲುಂಟೆ ಶಿವನು ಫಲ ಪದವ

## ತಾತ್ಪರ್ಯ

ಕಡಲೆ ತಿಂದವನ ಕೈಗೆ ನೀರನ್ನು ಕೊಡುವುದುಂಟೆ? ಕಡಲನ್ನು (ನೀರಿನ ಆಶ್ರಯವಾದ ಗಂಗೆಯನ್ನು) ಧರಿಸಿದವನನ್ನು ಎಂದರೆ ಲಿಂಗ ರೂಪನಾದ ಶಿವನನ್ನು ಐಕ್ಯ ಭಾವದಲ್ಲಿ ಭಜಿಸುವ ಶರಣನಿಗೆ ಶಿವನು ಫಲ ರೂಪವಾಗಿರುವ ಪದವಿಗಳನ್ನು ಕೊಡುವನೇನು? (ತನ್ನನ್ನೇ ಕೊಡುತ್ತಾನೆ ಎಂದರ್ಥ).

## ವಿಚಾರ

ಹುರಿಗಡಲೆಯನ್ನು ಬಹಳವಾಗಿ ತಿಂದು, ನೀರು ಕುಡಿದರೆ ಹೊಟ್ಟೆಯು ಉಬ್ಬಿ ಬಾಧೆಪಡುವನೆಂದು ತಿಳಿದು ನೀರನ್ನು ಕುಡಿಯಗೊಡುವದಿಲ್ಲ. ಹಾಗೆಯೇ ಫಲಪದವನ್ನು ಬೇಡುವುದು ಮತ್ತೆ ಹುಟ್ಟುವುದರ ಬೀಜವು. ಮರಳಿ ಜನ್ಮಜನ್ಮಗಳ ಬಾಧೆಯು ಹೆಚ್ಚಿ ತೊಂದರೆಯಾಗುವದು. ಆದ್ದರಿಂದ ಲಿಂಗಾಂಗ ಸಾಮರಸ್ಯವೇ ಮನುಷ್ಯತ್ವದ ಬಿಡುಗಡೆಯು (ಮೋಕ್ಷವು). (ಕಡಲೆಯನ್ನು ತಿನ್ನುವವನಿಗೆ ಕಡಲೆಯನ್ನೇ ಕೊಡಬೇಕಲ್ಲದೆ ನೀರನ್ನು ಕೊಡಲಾಗುವದಿಲ್ಲ ಇದರಂತೆ ಫಲವನ್ನು ಬೇಡುವವನಿಗೆ ಮಹಾದೇವನು ಫಲವನ್ನೇ ಕೊಡುತ್ತಾನೆ. ಶಿವನೇ ತಾನೆಂಬ ಸಾಮರಸ್ಯವು (ಕೂಡುವಿಕೆ) ಇದ್ದರೆ ಅವನೇ ಮಹಾದೇವನ ಸ್ವರೂಪನಾಗುತ್ತಾನೆ. ಆಗ ಫಲ ಪದವಿಗಳನ್ನು ಆತನು ಅಪೇಕ್ಷಿಸುವದಿಲ್ಲ. ಎಂಬ ವಿಚಾರವೂ ಇದರಲ್ಲಿ ಅಡಗಿರುತ್ತದೆ.)

---

೨೩. ತನ್ನ ಕೈ ಕಲಸೀಯೆ | ತನ್ನ ಬಾಯುಣ್ಣಲ್ಕೆ
ತನ್ನಂಗಕೆಲ್ಲ,—ಸುಖವಾಗೆ ಕೈ ಬಾಯ್ಗೆ
ಭಿನ್ನ ಸುಖವುಂಟೆ ಎಲೆ ಮರುಳೆ?

### ತಾತ್ಪರ್ಯ

ತನ್ನ ಕೈಯು ಆಹಾರವನ್ನು ಕಲಸಿ (ಕೂಡಿಸಿ) ಕೊಡುತ್ತದೆ ಬಾಯಿಯು ಊಟಮಾಡುತ್ತದೆ. ಹೀಗೆ ಮಾಡುವದರಿಂದ ತನ್ನ ದೇಹಕ್ಕೆಲ್ಲಾ ಸುಖವಾಗುತ್ತದೆ. ಆದರೆ ಕಲಸಿಕೊಟ್ಟ ಕೈಗೆ ಉಂಡ ಬಾಯಿಗೆ ಬೇರೆ ಸುಖವುಂಟೇ?

### ವಿಚಾರ

ಕೈ ಬಾಯಿಗಳು ತಾವು ಕೆಲಸಮಾಡಿದರೂ ದೇಹದ ಸುಖಕ್ಕಿಂತ ಬೇರೆಯಾದ ಹೆಚ್ಚಿನ ಫಲವನ್ನು ಹೇಗೆ ಹೊಂದುವದಿಲ್ಲವೋ ಹಾಗೆ ಶಿವಾತ್ಮ ಸ್ವರೂಪನಾಗುವಿಕೆ ಎಂಬ ಒಟ್ಟಿನ ಸುಖವನ್ನು ಪಡೆದವನಿಗೆ (ಶರಣನಿಗೆ) ಸ್ವರ್ಗ, ಐಶ್ವರ್ಯ ಮೊದಲಾದ ಇತರ ಸುಖಗಳ ಅವಶ್ಯಕತೆ ಇಲ್ಲ.

---

೨೪. ಉರಿಯುಂಡ ಕರ್ಪುರಕೆ ಕರಿಯುಂಟೆ ನೋಡುವರೆ
ವರ ವೀರಶೈವ—ನಾದ ಸದ್ಭಕ್ತಂಗೆ
ಇರಲುಂಟೆ ಕರ್ಮ ಫಲ ಶೇಷ

### ತಾತ್ಪರ್ಯ

ಜ್ಯೋತಿಯೊಡನೆ ಕೂಡಿದ ಕರ್ಪೂರಕ್ಕೆ ಉರಿಯು ತೀರಿದ ಮೇಲೆ ಕಪ್ಪು (ಇದ್ದಿಲು) ಅಥವಾ ಅದರಂತಿರುವ ಶೇಷವು ಉಳಿಯುವದಿಲ್ಲ. (ಈ ಕಾಲದ ಕರ್ಪೂರವು ಇದಕ್ಕೆ ವಿಲಕ್ಷಣವಾದದ್ದು ಬರುತ್ತಾ ಇರುವದರಿಂದ ಇದರ ಉಪಮಾನವನ್ನು ತೆಗೆದುಕೊಳ್ಳಬಾರದು.) ಇದರಂತೆ ಶ್ರೇಷ್ಠ ವೀರಶೈವನಾದ ಎಂದರೆ ಸಾಕಾರ ಸ್ವರೂಪನಾದ ಭಕ್ತನಿಗೆ ಅವನು ಮಾಡಿದ ಕರ್ಮದ ಫಲವನ್ನು ಅನುಭವಿಸುವ ಉಳುಮೆಯು ಇರುವುದೆಲ್ಲಿಯಾದರೂ ಉಂಟೇ?

### ವಿಚಾರ

ಕರ್ಮಗಳನ್ನು ತಾನು ಮಾಡುತ್ತೇನೆಂದು ಮಾಡುವುದಾದರೆ ಆ ಕರ್ಮದ ಫಲವನ್ನು ತಾನು ಅನುಭವಿಸಬೇಕಾಗುವದು. ಬರಿಯ ಮಾ

ಶಿನ ಬ್ರಹ್ಮಗೆ ಜ್ಞಾನದಿಂದ ಬ್ರಹ್ಮತ್ವವು ಬಂದಿರುವದೇ ಹೊರತು ಕರ್ಮದಿಂದ ಬಂದಿರುವದಿಲ್ಲ. ಶಿವನ ಸಾಕಾರ ರೂಪವೇ ತಾನಾದ ವೀರಶೈವನು ಬ್ರಹ್ಮವೇ (ಶಿವನೇ) ಕರ್ಮ ಮಾಡಿದಂತೆ ಮಾಡುತ್ತಾ ನಾದ್ದರಿಂದ ಅವನಿಗೆ ಕರ್ಮದ ಫಲವು ಉಳಿಯುವದಿಲ್ಲ.

ಸಾಕ್ಷಿ

ಅಂಗಂ ಕರ್ಪೂರಮಾಖ್ಯಾತಂ ಲಿಂಗಂ 'ತದ್ಗತ' ೧ ಮೇವಚ
ಏತಲ್ಲಿಂಗಾಂಗ ಸಂಯೋಗಃ ಶಿಖಿ ಕರ್ಪೂರಯೋಗವತ್
೧ ತದ್ಗಂಧ ಎಂದೂ ಇದೆ.

ಭಾವಾರ್ಥ

ಅಂಗವು ಕರ್ಪೂರವೆಂಬುದಾಗಿಯೂ ಲಿಂಗವು ಅದರೊಳಗಿನ ಪ್ರ ಕಾಶವಾಗಿ (ಉರಿಯಾಗಿ)ಯೂ ಇರುವದು. ಜ್ಯೋತಿ (ಪ್ರಕಾಶ) ಮತ್ತು ಕರ್ಪೂರವು ಕೂಡಿದಂತೆ ಈ ಲಿಂಗಾಂಗದ ಕೂಡುವಿಕೆಯೂ ಇರುತ್ತದೆ.

ವಿಚಾರ

ಒಂದೇ ವಸ್ತುವೇ ಅಂಗ ಲಿಂಗವೆನಿಸಿಕೊಂಡು ಕೂಡಿದಮೇಲೆ ಲಿಂಗವೊಂದೇ ಆಗಿ ಮತ್ತೇನೂ ಉಳಿದಿರುವದಿಲ್ಲ. ಕರ್ಪೂರ ಉರಿ ಎರಡೂ ಕೂಡಿ ಒಂದಾಗಿ ಉರಿಯೊಂದೇ ಉಳಿದಂತೆ.

---

೨೫. ಕರಿಯುಂಡ ಕಪಿತ್ಥವು ಇರಲುಂಟೆ ನೋಡುವರೆ
ತಿರುಳಿಲ್ಲವೆಂಬ—ಮಾಳ್ಕೆಯಿಂ ಭಕ್ತರೊಳ
ಗಿರಲುಂಟೆ ಕರ್ಮಫಲ ಶೇಷ.

ತಾತ್ಪರ್ಯ

ಆನೆಯು ತಿಂದ ಬೇಲದ ಹಣ್ಣು ಒಳಗೆ ತಿರುಳಿಲ್ಲದ್ದಾಗಿರುವದು ಅದರಂತೆ ಭಕ್ತರು ಮಾಡುವ ಕರ್ಮವು ಫಲವನ್ನು ಕಳೆದುಕೊಂಡಿರುವದು.

ವಿಚಾರ

ಆನೆಯು ಬೇಲದ ಹಣ್ಣನ್ನು ತಿಂದ ಮೇಲೆ ಅದರ ಲದ್ದಿಯಲ್ಲಿ ಬಂದ ಆ ಹಣ್ಣು ಮೊದಲಿದ್ದಂತೆ ಕಂಡರೂ ಅದರೊಳಗಿನ ತಿರುಳು

ಇರುವದಿಲ್ಲ: ಹೇಗೆ ಆನೆಯ ಹೊಟ್ಟೆಯೊಳಗಿನ ಉಷ್ಣಕ್ಕೆ ಆ ತಿರುಳು ಅಲ್ಲಿಯೇ ಕರಗಿರುವದೋ, ಅದರಂತೆ ಶಿವಭಕ್ತನಾದವನು ಮಾಡುವ ಕರ್ಮವು ಹೊರಗಿನವರಿಗೆ ಕರ್ಮದಂತೆ ಕಂಡರೂ ತಾನು ಶಿವ ಸ್ವರೂಪನಾದುದರಿಂದ ಕರ್ಮದ ತಿರುಳು ಅದರಲ್ಲಿ ಇಲ್ಲ.

### ಸಾಕ್ಷಿ

ಗಜಭುಕ್ತ ಕಪಿತ್ಥಸ್ಯ ಸ್ವರೂಪಂ ನಾಪಿ ದೃಶ್ಯತೆ
ಮದ್ ಭಕ್ತಸ್ಯ ಮದಂಗಸ್ಯ ದುರಿತಂ ನಾಸ್ತಿ ಪಾರ್ವತಿ

### ಭಾವಾರ್ಥ

ಪಾರ್ವತಿಯೇ ಕೇಳು, (ಶಿವನು ಹೇಳುತ್ತಾನೆ) ಆನೆಯು ತಿಂದ ಬೇಲದಹಣ್ಣಿಗೆ ಸ್ವರೂಪವೇ (ಒಳಗಿನ ತಿರುಳೇ) ಇರುವದಿಲ್ಲ. ಇದರಂತೆ ನನ್ನ ದೇಹವುಳ್ಳವನಾಗಿರುವ ನನ್ನ ಭಕ್ತನಿಗೆ ಪಾಪವಿಲ್ಲ.

### ವಿಚಾರ

ಮನುಷ್ಯನು ಕೆಟ್ಟ ಕೆಲಸ ಮಾಡಿದರೆ ಪಾಪವು ಬರುತ್ತದೆ. ಆ ಪಾಪದ ಫಲವು ದುಃಖ ರೂಪದಲ್ಲಿ ತೋರುತ್ತದೆ. ಇಷ್ಟ ಬ್ರಹ್ಮವನ್ನು ಧಾರಣಮಾಡಿದ ಶಿವಭಕ್ತನಿಗೆ ತಾನು ಶಿವನೆಂಬ ಜ್ಞಾನವಿದ್ದು ಅದಕ್ಕೆ ತಕ್ಕ ಆಚರಣೆ ಇರುವದರಿಂದ ಅವನು ಮಾಡುವ ಕೆಲಸವು ಕೆಟ್ಟದ್ದಲ್ಲ. ಆದ್ದರಿಂದ ಅವನಿಗೆ ಪಾಪವೇ ಇಲ್ಲ. ಈ ದೆಸೆಯಿಂದ ಅವನಿಗೆ ದುಃಖವೂ ಇಲ್ಲ. ಯಾರಾದರೂ ಅಂಥಾ ಜ್ಞಾನಾಚರಣೆಯಿಲ್ಲದೆ ಸ್ವೇಚ್ಛೆಯಲ್ಲಿ ನಡೆದರೆ ಅದು ತಪ್ಪಿನ ಕೆಲಸವಾಗುತ್ತದೆ.

---

೨೬. ತನ್ನ ಶಕ್ತಿಯ ನೆನಹಂ | ತನ್ನ ತಾನೆರಡಾಗಿ
ತನ್ನ ತಾ ಭಜಿಸಿ—ತನ್ನೊಳ್ ತಾ ನೊಡವೆರೆವ
ಬಿನ್ನಾಣವ ಶಿವನು ಧರಿಸಿದನು.

## ತಾತ್ಪರ್ಯ

ತನ್ನ ಶಕ್ತಿಯು ಸ್ಮರಣೆಮಾಡಿದ್ದರ ದೆಸೆಯಿಂದ ಶಿವನು ತನ್ನ ಷ್ಟಕ್ಕೆ ತಾನೇ ಎರಡಾಗಿ, ಶಕ್ತಿಯೇ ಅಂಗ ಶಿವನೇ ಲಿಂಗ ಎನಿಸಿ ಕೊಂಡು ತನ್ನನ್ನು ತಾನು ಸೇವಿಸಿ (ಅಂಗವು ಲಿಂಗ ಸೇವೆಮಾಡಿ) ತನ್ನಲ್ಲಿ ತಾನು ಕೂಡಿಹೋಗುವ ವಿಜ್ಞಾನ (ವಿಶೇಷ ಜ್ಞಾನ)ವನ್ನು ಧರಿಸಿದನು.

## ವಿಚಾರ

ಆಧುನಿಕ ಶಾಸ್ತ್ರ (Modern Science) ರೀತಿಯಾಗಿ ಜಗತ್ತಿನಲ್ಲಿ ಒಂದೇ ಮೂಲವಸ್ತು ಎನಿಸಿಕೊಂಡಿರುವ ಪರವಸ್ತುವು ಅನೇಕಪ್ರಕಾರದ ವಸ್ತುಗಳಾಗಿರುವಂತೆ ಶಿವನು ತಾನೇ ಒಂದು ತನ್ನ ಶಕ್ತಿಯೇ ಒಂದು ಹೀಗೆ ಎರಡಾಗಿ ತೋರಿದಾಗ್ಯೂ ಪರಿಣಾಮದಲ್ಲಿ ವಸ್ತುವು ಒಂದೇ (ತಾನೊಬ್ಬನೇ) ಆಗಿರುತ್ತಾನೆ.

## ಸಾಕ್ಷಿ

ಸ್ವಶಕ್ತಿ ಕ್ಷೋಭಮಾತ್ರೇಣ ಸ್ಥಲಂ ತದ್ ದ್ವಿವಿಧಂ ಭವೇತ್
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ

## ಭಾವಾರ್ಥ

ತನ್ನ ಶಕ್ತಿಯ ಸಂಕುಚಿತದ ದೆಸೆಯಿಂದ ಸ್ಥಲವು ಎರಡು ವಿಧವಾಯಿತು. ಒಂದು ಲಿಂಗಸ್ಥಲ, ಎರಡನೆಯದು ಅಂಗಸ್ಥಲ ಎಂಬದಾಗಿ ಹೇಳಲ್ಪಟ್ಟಿತು.

## ವಿಚಾರ

ಒಲೆಯೊಳಗಿನ ಕಟ್ಟಿಗೆಯೊಳಗಿನ ಅಗ್ನಿಯು ಒಲೆಯಮೇಲಿನ ಪಾತ್ರೆಯೊಳಗಿನ ನೀರಿಗೆ ವ್ಯಾಪಿಸಿ ಭಿನ್ನವಾದಂತೆ ತೋರುವದು. ಕಟ್ಟಿಗೆ ನೀರು ಎರಡೂ ಆರಿದಾಗ ಇದರೊಳಗಿನ ಉಷ್ಣಶಕ್ತಿಯು ಪ್ರಪಂಚದಲ್ಲಿ

ಇರುವ ಅಗ್ನಿ ತಪ್ತದಲ್ಲಿಯೇ ಸೇರಿ ಹೋಗುವದು. ಇದರಂತೆ ಶಿವನ ಚೈತನ್ಯವು ದೇಹದಲ್ಲಿ ಸೇರಿ ಅಂಗ ಎನಿಸಿಕೊಂಡಿರುತ್ತದೆ. ಅಂಗಕ್ಕೆ ಸಂಸ್ಕಾರವಾದರೆ ಆ ಅಂಗವೂ ಲಿಂಗದಲ್ಲೇ ಸೇರಿಹೋಗುತ್ತದೆ.

ಪ್ರಮಾಣ ೧

ಪರಮ ಹಂಸೋಪನಿಷತ್

ಸರ್ವಾನ್ ಕಾಮಾನ್ ಪರಿತ್ಯಜ್ಯ ಅದ್ವೈತೇ ಪರಮೇ ಸ್ಥಿತಿಃ

ಭಾವಾರ್ಥ

ಸಮಸ್ತ ಇಚ್ಛೆಗಳನ್ನೂ ಬಿಟ್ಟು (ಜೀವ ಶಿವ ಎಂಬ ಎರಡು ಭೇದ ಗಳನ್ನೂ ಕಳೆದು) ಪರಮಾದ್ವೈತದಲ್ಲಿ ಇರುವ ಆಚರಣೆಯು.

ವಿಚಾರ

ಮನುಷ್ಯನು ತನಗೆ ಫಲವು ಬೇಡವೆಂದು ಕಾರ್ಯಗಳನ್ನು ಮಾಡಿದರೆ ಆ ಕಾರ್ಯಗಳು ನಿಷ್ಕಾಮ ಕರ್ಮಗಳು ಎನಿಸಿಕೊಂಡಾಗ್ಯೂ ತನ್ನ ಸುಖ ಕ್ಕಾಗಿ ಕೆಲವು ಇಚ್ಛೆಗಳನ್ನು ಎಂದರೆ ಆಹಾರ ನಿದ್ರೆ ಮೊದಲಾದವುಗಳ ಬಯಕೆಯನ್ನು ಮಾಡಬೇಕಾಗುತ್ತದೆ. ಹೀಗೆ ಮಾಡಿದರೆ ಅದೂ ಕಾಮವೆನ್ನಿಸಿಕೊಳ್ಳುತ್ತದೆ. ಅದಕ್ಕೂ ಫಲಪದವಿ (ಮರಳಿ ಹುಟ್ಟಿ ಸಾಯುವ ದೇವತೆಗಳೇ ಮೊದಲಾದವರ ಪದವಿಯು) ಉಂಟು. ನಾನು ಬ್ರಹ್ಮನೆಂದು ಹೇಳುವ ಬರಿಯ ಮಾತಿನ ದೆಸೆಯಿಂದ ಅದ್ವೈತದ ಆಚರಣೆಯು ಬರುವದಿಲ್ಲ. ಇಂಥಾ ಕಾರ್ಯಗಳನ್ನು ಕೂಡಾ ಶಿವನೇ (ಲಿಂಗವೇ) ಮಾಡುತ್ತಾನೆ, ಎಂದು ಲಿಂಗಕ್ಕೆ ಒಪ್ಪಿಸಿ ಮಾಡುವ ಆಚರಣೆಯು ಪರಮಾದ್ವೈತದಲ್ಲಿ ಇರು ವಿಕೆಯಾಗುತ್ತದೆ. [ಈ ವಿಶೇಷ ಜ್ಞಾನವು (ವಿಜ್ಞಾನವು) ಶಿವನದೇ ಎಂಬ ಭಾವನೆಯು ವೀರಶೈವರಲ್ಲಿ ಇರುತ್ತದೆ.] ಆದ್ದರಿಂದ ಕೇವಲ "ಶಿವ ಏವ ಶಿವಃ ನಾನ್ಯಃ" ಎಂದರೆ ಶಿವನೊಬ್ಬನೇ ಉಂಟು ಬೇರೆ ಯಾರೂ ಇಲ್ಲ, ಎಂಬ ಆಚರಣೆಯು ಲಿಂಗಾಂಗ ಸಾಮರಸ್ಯದಲ್ಲಿ ಉಂಟು. ಲಿಂಗ, ಅಂಗ, ಎಂಬೆರಡು ಇದ್ದರೂ ಕೊನೆಯಲ್ಲಿ ಲಿಂಗ ವೊಂದೇ ಇರುವದೆಂಬುದೇ ಈ ಸಾಮರಸ್ಯದ ನೆಲೆಯು.

ಪ್ರಮಾಣ

ಭಗವದ್ಗೀತೆ ೨ ನೆಯ ಅಧ್ಯಾಯ ಶ್ಲೋಕ ೭೧.

ವಿಹಾಯ ಕಾಮಾನ್ ಸರ್ವಾನ್ ಯಃ ಪುಮಾಂಶ್ಚರತಿ ನಿಸ್ಪೃಹಃ
ನಿರ್ಮಮೋ ನಿರಹಂಕಾರೋ ಸ ಶಾಂತಿ ಮಧಿಗಚ್ಛತಿ

ಭಾವಾರ್ಥ

ಮನುಷ್ಯನು ಸರ್ವ ಇಚ್ಛೆಗಳನ್ನೂ ಬಿಟ್ಟು ಅಹಂಕಾರ (ನಾನೆಂಬುದು) ಮಮಕಾರ (ನನ್ನದೆಂಬುದು) ಇವುಗಳೂ ಇಲ್ಲದವನಾಗಿ ನಿರಾಶಕನೆನ್ನಿಸಿಕೊಂಡರೆ ಅವನು ಶಾಂತಿಯನ್ನು ಹೊಂದುತ್ತಾನೆ. (ಮುಂದೆ ಮಹಾದೇವನನ್ನು ಹೊಂದಲು ಯೋಗ್ಯತೆಯು ಬರುತ್ತದೆ.)

(ಈ ಪ್ರಮಾಣಗಳು ಹಿಂದಿನ ಓಪದ್ಯಗಳಿಗೂ ಬೇಕಾದ ಮುಖ್ಯ ಪ್ರಮಾಣಗಳಾಗಿವೆ.)

---

೨೭. ತನ್ನ ತಾನರ್ಚಿಸುವ ತನ್ನ ತಾ ಪೂಜಿಸುವ
ತನ್ನನೇ ತಾನು—ನೆನೆವುತ್ತಲೆ ನುತಿಸುವ
ಬಿನ್ನಣವ ಶಿವನು ಧರಿಸಿದನು.

೧ ನು ಎಂಬುದಕ್ಕೆ ನ್ತು ಎಂದೂ ಇದೆ.

ತಾತ್ಪರ್ಯ

ಶಿವನು ತನ್ನನ್ನು ತಾನು ಅಭಿಷೇಕಿಸುವಂಥ, ತನ್ನನ್ನು ತಾನು ಪೂಜಿಸುವಂಥ, ತನ್ನನ್ನೇ ತಾನು ಸ್ಮರಿಸುತ್ತಿರುವಂಥ, ಸ್ತೋತ್ರಮಾಡುತ್ತಿರುವಂಥ ವಿಜ್ಞಾನ (ವಿಶೇಷ ಜ್ಞಾನರೂಪ) ವನ್ನು ಧರಿಸಿದನು.

ವಿಚಾರ

ಆಧುನಿಕ ಶಾಸ್ತ್ರ ( Science ) ರೀತಿಯಲ್ಲಿ ಒಂದು ವಸ್ತುವು ಒಮ್ಮೆ ಕರಗಿ ನೀರಾಗುತ್ತದೆ, ಒಮ್ಮೆ ಗಟ್ಟಿಯಾಗುತ್ತದೆ, ಒಮ್ಮೆ ವಾಯುರೂಪವನ್ನು ಧರಿಸುತ್ತದೆ, ಆದರೂ ತನ್ನ ನಿಜವಾದ ಸ್ಥಿತಿಯನ್ನು ಬಿಟ್ಟಿರುವದಿಲ್ಲ. ಇದರಂತೆ ಶಿವನು (ಪರವಸ್ತುವು) ಒಮ್ಮೆ ಅಂಗ ರೂಪದಿಂದ

ಸೇವೆಮಾಡುವವನಾದಾಗ್ಯೂ ಲಿಂಗ ರೂಪದ ನಿಜಸ್ಥಿತಿಯಲ್ಲಿಯೇ ಇರುತ್ತಾನೆ. ಸಹಜ ಸ್ಥಿತಿಗೆ ಭಿನ್ನನಾಗಿ ಇರುವದಿಲ್ಲ. ಇದೇ ಶಿವಾದ್ವೈತ ಜ್ಞಾನದ ಬೋಧೆಯಾಗಿದೆ.

---

೨೮. ಚಿನ್ನ ಬಣ್ಣಗಳಂತೆ ರನ್ನದೀಪ್ತಿಗಳಂತೆ
ಚೆನ್ನ ಸಂಪಿಗೆಯ—ಪುಷ್ಪ ಪರಿಮಳದಂತೆ
ಭಿನ್ನವಿಲ್ಲೇಕ ಲಿಂಗಾಂಗ

## ತಾತ್ಪರ್ಯ

ಚಿನ್ನಕ್ಕೂ ಅದರ ಒರೆಗೂ (ಬಣ್ಣಕ್ಕೂ) ಬೇರೆ ಬೇರೆ ಇರುವಿಕೆಯು ಇಲ್ಲ. ರತ್ನಕ್ಕೂ ಆದರ ಪ್ರಕಾಶಕ್ಕೂ ಭಿನ್ನತ್ವವಿಲ್ಲ. ಒಳ್ಳೆಯ ಸಂಪಿಗೆಯ ಹೂ ಮತ್ತು ಅದರ ಸುವಾಸನೆಗೂ ಅಗಲುವಿಕೆ ಇಲ್ಲ, ಇದರಂತೆ ಲಿಂಗ ಮತ್ತು ಅಂಗಕ್ಕೆ ಬೇರೆ ಎಂಬ ಭಾವನೆ ಇಲ್ಲ ಇವು ಒಂದೇ ಆಗಿರುತ್ತವೆ.

## ಸಾಕ್ಷಿ

ನ ಶಿವೇನ ವಿನಾಶಕ್ತಿ ರ್ನ ಶಕ್ತಿ ರಹಿತಃ ಶಿವಃ
ಪುಷ್ಪಗಂಧಮಿವಾನ್ಯೋನ್ಯಂ ಮಾರುತಾಂಬರಯೋರಿವ

## ಭಾವಾರ್ಥ

ಶಿವನನ್ನು ಬಿಟ್ಟು ಶಕ್ತಿಯು ಇರುವದಿಲ್ಲ. ಶಕ್ತಿಯನ್ನು ಬಿಟ್ಟು ಶಿವನಿರುವದಿಲ್ಲ. ಹೂವು ಮತ್ತು ಗಂಧ, ಗಾಳಿ ಮತ್ತು ಆಕಾಶ ಇವು ಪರಸ್ಪರ ಹೇಗೆ ಕೂಡಿಕೊಂಡಿರುವವೋ ಹಾಗೆ.

## ವಿಚಾರ

ಹೂವು, ಗಂಧ ಇವು ಬೇರೆಇರುವಂತೆ ತೋರುತ್ತವೆ. ಕೆಲವರು ಇವುಗಳನ್ನು ಎರಡೆಂಬದಾಗಿ ಯೋಚಿಸುತ್ತಾರೆ, ಆದರೆ ಇವೆರಡೂ ಒಂದೇ ಆಗಿ ಹೇಗಿರುವವೋ ಹಾಗೆ ಅಂಗ ಲಿಂಗ ಎಂಬಿವು ಎರಡಾಗಿ ಕಂಡರೂ ಇವೆರಡೂ ಒಂದೇ. ಒಂದನ್ನೊಂದು ಬಿಟ್ಟಿರುವಂತಿಲ್ಲ.

ಪ್ರಮಾಣ

ಪರಮ ಹಂಸೋಪನಿಷತ್

ಪರಮಾತ್ಮಾತ್ಮನೋರೇಕತ್ವ ಜ್ಞಾನೇನ ತಯೋರ್ಭೇದ ಏವ ವಿಭಗ್ನಃ

ಭಾವಾರ್ಥ

ಆತ್ಮ ಪರಮಾತ್ಮ ಇವರಿಬ್ಬರೂ ಒಂದೇ ಎಂಬ ಜ್ಞಾನವನ್ನು ಹಿಡಿದು ಆಚರಣೆಯಲ್ಲಿಯೂ ಇವರ ಭೇದವನ್ನು ನಾಶಮಾಡುವುದು.

---

೨೯. ಸತಿಯು ತತ್ ಪತಿಯೊಡನೆ ಪತಿ ಭಕ್ತೆಯಾಗಿರಲು
ಗತಿ ಮೋಕ್ಷ ಒಂದೆ—ಯಹುದ್ಯೆಸೆ ಲಿಂಗಾಂಗ
ದ್ವಿತಯು ತಾನೊಂದೆ ಬೇರಿಲ್ಲ.

ತಾತ್ಪರ್ಯ

ಹೆಂಡತಿಯು ಗಂಡನಲ್ಲಿ ಭಕ್ತಿಯುಳ್ಳವಳಾಗಿದ್ದರೆ (ಪತಿವ್ರತೆಯಾದರೆ) ಆಕೆಯು ಮುಂದಕ್ಕೆ ಹೋಗೋಣವೂ ಮುಂದಕ್ಕೆ ಹೋಗದೆ ನಿಲ್ಲೋಣವೂ ಗಂಡನಕೂಡ ಒಂದೇ ವಿಧವಾಗಿರುವದಲ್ಲವೇ ? ಲಿಂಗ, ಅಂಗ ಎಂಬ ಇವೆರಡೂ ಒಂದೇ ಆಗಿರುವವೇ ಹೊರತು ಬೇರೆಯಾಗಿ ಇಲ್ಲ.

ವಿಚಾರ

ಗಂಡನು ಮುಂದೆ ನಡೆದರೆ ಪತಿವ್ರತೆಯಾದ ಹೆಂಡತಿಯು ತಾನೂ ನಡೆವಳು, ಗಂಡನು ನಿಂತರೆ ತಾನೂ ನಿಲ್ಲುವಳು. ನಡೆಯುವದೇ ಆಗಲೀ ನಿಲ್ಲುವುದೇ ಆಗಲೀ ಎರಡೂ ಒಂದೇ ಎಂದರೆ ಗಂಡನ ಕೂಡ ಒಂದಾಗಿ ಇರುವವೇ ಪತಿವ್ರತಾ ಲಕ್ಷಣ. ಇದರಂತೆ ಲಿಂಗವನ್ನು ಅನುಸರಿಸಿಕೊಂಡು ಅಂಗದ (ಶರಣನ) ವರ್ತನವು ಇರುತ್ತದೆ.

ಪ್ರಮಾಣ

ಬ್ರಹ್ಮೋಪನಿಷತ್

ಏಕೋದೇವ ಸ್ಸರ್ವ ಭೂತೇಷು ಗೂಢಃ ಸರ್ವ ವ್ಯಾಪೀ ಸರ್ವಭೂತಾಂತರಾತ್ಮಾ, ಕರ್ಮಾಧ್ಯಕ್ಷಃ ಸರ್ವಭೂತಾಧಿ ವಾಸಃ, ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ

. ........... ...

ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ, ತೇಷಾಂ ಸುಖಂ ಶಾಶ್ವತಂ ನೇತರೇಷಾಂ

ಭಾವಾರ್ಥ

ಎಲ್ಲಾ ಭೂತಗಳಲ್ಲಿಯೂ ಗುಪಿತವಾಗಿ ಇರುವವನು, ಎಲ್ಲ ಕಡೆಗೂ ವ್ಯಾಪಿಸಿವವನು, ಎಲ್ಲಾ ಪ್ರಾಣಿಗಳ ಅಂತರಂಗದಲ್ಲಿ ಇರುವವನು, ಎಲ್ಲಾ ಕರ್ಮಗಳನ್ನು ಮಾಡುವ ಯಜಮಾನನು, ಎಲ್ಲಾ ಭೂತಗಳಲ್ಲಿ ವಾಸಮಾಡಿಕೊಂಡು ಇರುವವನು, ಎಲ್ಲಾ ಕೆಲಸಗಳನ್ನು ನೋಡಿಕೊಂಡಿರುವವನು, ಕೇವಲ (ಒಬ್ಬನೇ) ಆಗಿ ಇರುವವನು, ಗುಣರಹಿತನಾಗಿ ಇರುವವನು, ಒಬ್ಬನೇ ದೇವನಾಗಿದ್ದಾನೆ. ಈ ದೇವನು ತಮ್ಮಲ್ಲಿಯೇ ಇದ್ದಾನೆ, ಎಂದು ಯಾರು ತಿಳಿವರೋ ಅವರೇ ಧೀರರು (ವೀರರು) ಅವರ ಸುಖವೇ ಶಾಶ್ವತ ಸುಖ. ಉಳಿವವರದು ಅಂಥಾ ಸುಖವಲ್ಲ.

ವಿಚಾರ

ಕರ್ಮಗಳಿಗೆ ಒಡೆಯನಾದವನೂ ಮಹಾದೇವನೇ ಎಂದು ಇದರಲ್ಲಿ ಹೇಳಲ್ಪಟ್ಟಿರುವ ಪ್ರಕಾರ ಸತಿ ಸ್ವರೂಪನಾದ ಶರಣನು ತನ್ನ ಜ್ಞಾನಾಚರಣೆಯನ್ನು ಪತಿಯಾದ ಲಿಂಗವೇ ಮಾಡುವನೆಂದು ತಿಳಿದು ಆ ಲಿಂಗದೊಡನೆ ಕೂಡಿ ಭಿನ್ನವಿಲ್ಲದೆ ನಡೆಯುತ್ತಾನೆ. ಇಂಥಾ ವೀರ ಭಕ್ತಿಯು ಉಳಿದವರಲ್ಲಿ ಇರುವದಿಲ್ಲವಾದ್ದರಿಂದ ಶಿವ ಶರಣನ ಸುಖವೇ ಶ್ರೇಷ್ಠವಾದ ಸುಖವಾಗಿರುತ್ತದೆ.

---

೩೦. ರುದ್ರನಾದವ ಮುನ್ನ ರುದ್ರನನು ಅರ್ಚಿಸುವ
ರುದ್ರನನು ನೆನೆವ—ರುದ್ರನಲ್ಲದೆ ನ ಸ್ಮ
ರೇದ್ರುದ್ರಮೆಂದು ಶೃತಿಸಾರ್ಗ್ಗು

ತಾತ್ಪರ್ಯ

ಮೊದಲು ತಾನು ರುದ್ರನಾಗಿ ರುದ್ರಪೂಜೆಯನ್ನು ಮಾಡುತ್ತಾನೆ, ರುದ್ರನನ್ನು ನೆನೆಯುತ್ತಾನೆ. ಹಾಗೆ ರುದ್ರನಾಗದೆ ಇರುವವನು ನೆನೆ

ಯಬಾರದೆಂದು ಶೃತಿಯು ಸಾರುತ್ತದೆ.

### ವಿಚಾರ

ಮನುಷ್ಯನಾಗಿ ರುದ್ರ ಪೂಜೆಮಾಡಿದರೆ ಪೂಜಿಸುವವನು ಮನುಷ್ಯ, ಪೂಜಿಸಿಕೊಳ್ಳುವವನು ರುದ್ರ ಎಂಬಎರಡು ಭಾವನೆಯುಂಟಾಗಿ ದ್ವೈತವಾದಂ ತಾಗುವುದು. ರುದ್ರನಾಗಿ ರುದ್ರಪೂಜೆಮಾಡಿದರೆ ಅದ್ವೈತ ಸಿದ್ಧಿಸುತ್ತದೆ. ಅದ್ವೈತವೇ ಯಾವಾಗಲೂ ನೆಲಸಿರುವಂಥಾದ್ದು. ಇದರಂತೆ ಲಿಂಗವಾಗಿ ಲಿಂಗ ಪೂಜೆ ಮಾಡಬೇಕೆಂಬುದೂ ನಿರ್ಣಯವಾದ ವಿಷಯವಾಗಿದೆ

ಹೀಗಿಲ್ಲದೆ ಇದ್ದವನು ಪೂಜೆಮಾಡಬಾರದು, ಎಂದು ಹೇಳಿರುವದರ ತಾತ್ಪರ್ಯವೇನಂದರೆ:–

"ಹಾಗೆ ಮಾಡಿದರೆ ತಾನು ದೇವನಿಗೆ ಭಿನ್ನನಾದ್ದರಿಂದ ತನಗೆ ಭಿನ್ನಸ್ಥಿತಿಯ ಸುಖವು ಸಿಕ್ಕುವದು. ಆದ್ದರಿಂದ ಹಾಗೆ ಪೂಜಿಸುವುದು ಅತ್ಯಂತ ಶ್ರೇಷ್ಠ ಫಲವನ್ನು ಕೊಡುವದಿಲ್ಲ." ಎಂಬುದೇ ಆಗಿರುತ್ತದೆ.

### ಪ್ರಮಾಣ

ರುದ್ರೋ ಭೂತ್ವಾ ಯಜೇದ್ರುದ್ರಂ 'ನಾರುದ್ರೋ'೧ ರುದ್ರಮರ್ಚಯೇತ್

೧ (ನ + ಅರುದ್ರಃ)

### ಭಾವಾರ್ಥ

ರುದ್ರನಾಗಿ ರುದ್ರನ ಪೂಜೆಯನ್ನು ಮಾಡಬೇಕು. ರುದ್ರನಾಗ ದವನು ರುದ್ರ ಪೂಜೆಯನ್ನು ಮಾಡಲಾಗದು.

---

೩೧. ಭಕ್ತ ಸೇವೆಯ ಮಾಳ್ಪ ಭಕ್ತರೊಳು ಒಡನುಂಬ
ಭಕ್ತರಿಗೆ ಪ್ರಾಣ—ವಾಗಿರ್ಪ ಪರಶಿವನು
ಭಕ್ತ ದೇಹಿಕನು ಇದು ಸತ್ಯ

### ತಾತ್ಪರ್ಯ

ಮಹಾದೇವನು ಭಕ್ತರ ಸೇವೆಯನ್ನು ಮಾಡುವವನು, ಭಕ್ತರೊ ಡನೆ ಕೂಡಿ ಊಟಮಾಡುವವನು, ಭಕ್ತರ ಪ್ರಾಣವೇ ತನ್ನ ಪ್ರಾಣ

ವಾಗಿ ಇರುವವನು ಆದ್ದರಿಂದ ಭಕ್ತ ದೇಹವೇ ತನ್ನ ದೇಹವೆಂಬಂತೆ ಆತನು ಇರುತ್ತಾನೆ.

(ಮೇಲಿನ ೨೭ ನೆಯ ಪದ್ಯದಲ್ಲಿ ಶಿವನು ಅನೇಕ ರೂಪಗಳನ್ನು ಹೊಂದುತ್ತಾನೆ. ಎಂಬುದಕ್ಕೆ ವಿವರವಿದೆ.)

---

೩೨. ಗಿರಿಯೊಳ್ ಸುರ ಗಿರಿಯಧಿಕ ಕರಿಯೊಳೈರಾವತನು
ಹರಿಯಜರ ಒಳಗೆ—ಹರನಧಿಕ ನರರೊಳಗೆ
ಹರಭಕ್ತನಧಿಕ ವಿಮು ಸತ್ಯ

ತಾತ್ಪರ್ಯ

ಬೆಟ್ಟಗಳಲ್ಲಿ ಕೈಲಾಸಪರ್ವತವು ಶ್ರೇಷ್ಠ, ಆನೆಗಳಲ್ಲಿ ಐರಾವತ (ಇಂದ್ರನ ಆನೆ=ಬಿಳಿಯಾನೆ) ಶ್ರೇಷ್ಠ, ವಿಷ್ಣು ಬ್ರಹ್ಮರಲ್ಲಿ ಶಿವನು ಶ್ರೇಷ್ಠ. ಮನುಷ್ಯರಲ್ಲಿ ಶಿವಭಕ್ತನು ಶ್ರೇಷ್ಠ, ಇದು ನಿಜ.

ವಿಚಾರ

ಅದ್ವೈತ ಬೋಧೆಯನ್ನು ಮಾಡಿದವರಲ್ಲಿ ಕೈಲಾಸದ ಶಿವನೇ ಮೊದಲನೆಯವನು. ಇತರ ದೇವತೆಗಳ ಬೋಧೆಯು ಹಾಗಿಲ್ಲ. ಅದ್ವೈತ ಜ್ಞಾನ ಒಂದರಿಂದಲೇ ಎಲ್ಲಾ ಜನರನ್ನು ಒಂದೇ ಸಮನಾಗಿ ಕಾಣಲಿಕ್ಕೆ ಬರುವದು, ಆದ್ದರಿಂದ ಶಿವನ ಬೋಧೆಯಾಗಿರುವ ಶಿವಾದ್ವೈತ ಜ್ಞಾನಕ್ಕೆ ತಕ್ಕಂತೆ ಆಚರಣೆಯುಳ್ಳ ಶಿವಭಕ್ತನು ಶ್ರೇಷ್ಠ, ಸರ್ವರನ್ನೂ ತನ್ನಂತೆ ಕಾಣುವವನೇ ಶ್ರೇಷ್ಠ, ಎಂಬ ವಾಕ್ಯವನ್ನು ಶಿವಭಕ್ತನು ಪಾಲಿಸುವದರಿಂದ ಇವನು ಶ್ರೇಷ್ಠನೆಂಬುವದು ನಿಜ. ಇವನೂ ಶಿವಾದ್ವೈತನು, ಆದ್ದರಿಂದಲೇ ಶ್ರೇಷ್ಠತೆಯು ಬಂದಿದೆ.

ಸಾಕ್ಷಿ

ಪುಲ್ಕಸ ಶ್ವಪಚೋವಾಪಿ ಶಿವಭಕ್ತೋ ಮಹಾನ್ ಭವೇತ್
ಬ್ರಹ್ಮ ವಿಷ್ಣು ಸುರೇಂದ್ರೈಶ್ಚ ಪೂಜ್ಯತೇ ರಾಜಪುತ್ರವತ್

ಭಾವಾರ್ಥ

ಶ್ವಪಚನಾಗಲೀ ಪುಲ್ಕಸನಾಗಲೀ ಶಿವಭಕ್ತನಾದರೆ ಅವನೇ ದೊ

ದತ್ವಾ ಯಜ್ಞಫಲಂ ವಿೀದ್ಯಾತ್ ಕಿಮು ತದ್ವಸ್ತುದಾನತಃ

ಭಾವಾರ್ಥ

ಎಲ್ಲಾ ಶಿವಭಕ್ತರಿಗೆ ಏನೋ ಸ್ವಲ್ಪ ಭಾಗವನ್ನು ಆದರದಿಂದಕೊಟ್ಟರೆ ಕೊಟ್ಟವನಿಗೆ ಯಜ್ಞ ಫಲವು ದೊರಕುವದು. ಪೂರಾ ವಸ್ತುವನ್ನೇ ಕೊಟ್ಟರೆ ಹೇಳುವದೇನು? (ಮಹತ್ ಫಲವುಂಟು, ಎಂಬ ತಾತ್ಪರ್ಯ)

---

೩೬. ಪ್ರಾಣ ಲಿಂಗವು ಇರಲು ಕಾಣಬಹ ಲಿಂಗವೇಂ
ಪ್ರಾಣವೇ ಲಿಂಗ—ವೆಂದುಲಿವ ವಾಗದ್ವೈತಿ
ಕೋಣ ಕೇಳೆಲವೊ, ದೃಷ್ಟವನು.

ತಾತ್ಪರ್ಯ

ಪ್ರಾಣವು ಲಿಂಗವಾಗಿ ಇರುತ್ತಿರಲು, (ತನ್ನ ಪ್ರಾಣವೇ ಬ್ರಹ್ಮವಾಗಿರಲು) ಹೊರಗೆ ಕಾಣಬರುತ್ತಿರುವ ಲಿಂಗ(ಬ್ರಹ್ಮ)ವು ಏನು ಪ್ರಯೋಜನ? ಆದ್ದರಿಂದ ಪ್ರಾಣವೇ ಲಿಂಗ (ಬ್ರಹ್ಮ) ಎಂಬದಾಗಿ ಹೇಳುವ ಬರಿಯ ಮಾತಿನ ಅದ್ವೈತಿ ಎಂಬ ಕೋಣ (ದಡ್ಡ) ನೇ ದೃಷ್ಟಾಂತರ (ಉದಾಹರಣ) ವನ್ನು ಕೇಳು.

ವಿಚಾರ

ಇಲ್ಲಿ 'ಕೋಣ' ಎಂಬ ಶಬ್ದವು ಪ್ರಾಸಕ್ಕಾಗಿ ಉಪಯೋಗಿಸಲ್ಪಟ್ಟಂತೆ ತೋರುತ್ತದೆ. ಎರಡನೆಯ ಪದ್ಯದ ವಿಚಾರದಲ್ಲಿ ಹೇಳಲ್ಪಟ್ಟಂತೆ ಪ್ರಾಣವೊಂದೇ ಬ್ರಹ್ಮವಾದರೆ ದೇಹವು ಜಡವಾಗುವದಿಲ್ಲವೇ! ಆಗ ಅದ್ವೈತ ಸಿದ್ಧಿಯು ಹೇಗೆ ಆಗುವದು? ದೇ ಹ ವೂ ಬ್ರಹ್ಮವೆಂದು ಹೇಳುವದಾದರೆ ಈ ದೇಹವು ಚೈತನ್ಯವಿಲ್ಲದ ಸ್ಥಿತಿಗೆ ಬಂದಾಗ ಇದನ್ನು ಬ್ರಹ್ಮವೆಂದು ಗುರ್ತಿಸುವುದು ಹೇಗೆ? ಈ ಲೋಕದಲ್ಲಿ ಉಳಿಯುವ ವಸ್ತುವಿಗೆ ಈ ಲೋಕದಲ್ಲಿಯೇ ಉಳಿಯುವಂಥಾ ಒಂದು ಬ್ರಹ್ಮರೂಪವಾಗಬೇಕಲ್ಲವೇ! ಇಂಥಾ ಯೋಜನೆಯು ಇಲ್ಲದಿರುವದರಿಂದ ಬರಿಯ ಮಾತಿನ ಅದ್ವೈತಿಯು ದಡ್ಡನಾಗಿರುತ್ತಾನೆ. ತನ್ನ ಅದ್ವೈತ ಸಿದ್ಧಿಯ ಕಾರ್ಯದ ಕಡೆಗೆ ಆ ತ ನು ಗಮನ ಕೊಡುವದಿಲ್ಲ. ಹೇಳುವದರಲ್ಲಿ ಮಾತ್ರ ನಿಪುಣ. ಆದ್ದರಿಂದ ಇವನನ್ನು ನಿಜವಾದ ನಿಪುಣನೆಂದು ಬಲ್ಲವರು ತಿಳಿಯುವದಿಲ್ಲ.

---

೩೭. ಪ್ರಾಣ ಲಿಂಗವು ನಿನ್ನ ಪ್ರಾಣ ತಾನಾದೊಡೆ
ಮಾಣದೇ ನಿನ್ನ—ತೃಷೆ ಹಸಿವು ಜರೆ ಮರಣ
ಕಾಣದೇಕೂಳ್ಪೆ? ಎಲೆ ಮರುಳೆ!
ಏಕೆ + ಊಳ್ವೆ = ಏಕೊಳ್ವೆ

ತಾತ್ಪರ್ಯ

ಬರಿಯ ಮಾತಿನ ಅದ್ವೈತಿಯೇ, ನಿನ್ನ ಪ್ರಾಣವು ಬ್ರಹ್ಮವಾದರೆ ನಿನಗೆ ಬಾಯಾರಿಕೆ, ಹಸಿವು, ಮುದಿತನ ಮರಣಗಳು ಬರುವದನ್ನು ನೀನು ತಿಳಿಯದೆ (ನೋಡದೆ) ಸುಮ್ಮನೆ ಏಕೆ ಕೂಗುತ್ತೀ? ಎಲೆ ಹುಚ್ಚನೇ.

ವಿಚಾರ

ಮಾತಿನ ಅದ್ವೈತಿಯು ತಾನು ಬ್ರಹ್ಮ ಎಂದು ಹೇಳಬೇಕಾದರೆ, ತನ್ನ ಪ್ರಾಣಕ್ಕೆ ಬ್ರಹ್ಮವೆನ್ನುತ್ತಾನೆ. ಆತನು ದೇಹವನ್ನು ಬ್ರಹ್ಮ ಎಂದು ಹೇಳುವದಿಲ್ಲವಾದ್ದರಿಂದ ದೇಹದ ಕರ್ಮಗಳಾದ ಹಸಿವು ಬಾಯಾರಿಕೆ ಮೊದಲಾದವುಗಳನ್ನು ಅವನು ಅನುಭವಿಸಲೇ ಬೇಕಾಗುವದು.

ಪ್ರಮಾಣ

ತೇಜೋ ಬಿಂದೂಪನಿಷತ್: ೧ ನೆಯ ಅಧ್ಯಾಯ ಶ್ಲೋಕ ೪೬.

ಕುಶಲಾ ಬ್ರಹ್ಮವಾರ್ತಾಯಾಂ ವೃತ್ತಿ ಹೀನಾಃ ಸುರಾಗಿಣಃ
ತೇಪ್ಯಜ್ಞಾನತಯಾ ನೂನಂ ಪುನರಾಯಾಂತಿ ಯಾಂತಿ ಚ

ಭಾವಾರ್ಥ

ಬ್ರಹ್ಮವಾರ್ತೆಯನ್ನು ಹೇಳುವದರಲ್ಲಿ ಕುಶಲರು. ಆದರೆ ಅದಕ್ಕೆ ತಕ್ಕ ನಡತೆಯಿಲ್ಲದವರಾಗಿ ಲೌಕಿಕ ಪ್ರೇಮವುಳ್ಳವರಾಗಿರುವವರು ತಮ್ಮ ಅಜ್ಞಾನದ ದೆಸೆಯಿಂದ ಸಾಯುತ್ತಾರೆ, ಮತ್ತು ಮರಳಿ ಹುಟ್ಟಿ ಬರುತ್ತಾರೆ.

---

೩೮. ಶ್ರೇಷ್ಠ ಗುರು ಕರುಣದಲಿ ಇಷ್ಟ ಲಿಂಗವ ಪಡೆದು
ಅಷ್ಟ ವಿಧ ಪೂಜೆ—ಯನು ಮಾಡಿ ಸಮರಸದಿ
ಶ್ರೇಷ್ಠವಹ ಬ್ರಹ್ಮ ಪ್ರಾಣವೈ

### ತಾತ್ಪರ್ಯ

ಶ್ರೀಷ್ಠನಾದ ಗುರುವಿನ ಕರುಣದಿಂದ ಇಷ್ಟ ಲಿಂಗವನ್ನು ಪಡೆದು ಕೊಂಡು ಅಷ್ಟ ವಿಧದಲ್ಲಿ ಅದನ್ನು ಪೂಜಿಸಿ ಅದರೊಡನೆ ಸಾಮರಸ್ಯ (ಐಕ್ಯ) ವನ್ನು ಹೊಂದುವ ಪ್ರಾಣವು ಶ್ರೀಷ್ಠವಾದ ಬ್ರಹ್ಮ (ಪ್ರಾಣಲಿಂಗ) ವಾಗಿ ಇರುತ್ತದೆ.

### ವಿಚಾರ

ದೇಹವು ಲಿಂಗವಾದರೆ ಅದನ್ನು ಆಶ್ರಯಿಸಿರುವ ಪ್ರಾಣವು ಲಿಂಗವಾಗುತ್ತದೆ. ಆದ್ದರಿಂದ ಶ್ರೀ ಗುರುವಿನಿಂದ ದೇಹದ ಅಳತೆಗೆ ಸಮಾನವಾದ ಪಂಚ ಸೂತ್ರವುಳ್ಳ ಇಷ್ಟ ಲಿಂಗವನ್ನು ಪಡೆದು ಧರಿಸಿದ್ದರ ದೆಸೆಯಿಂದ ದೇಹವು ಲಿಂಗವಾದರೆ ಆ ಲಿಂಗ ಸಂಬಂಧದಿಂದ ಪ್ರಾಣವೂ ಲಿಂಗವಾಗುತ್ತದೆ. ಲಿಂಗ ಪೂಜೆಯಲ್ಲಿ ಪ್ರಾಣಲಿಂಗದೊಡನೆ ಭಾವದಲ್ಲಿ ಲಿಂಗವೆಂಬ ಭಾವನೆಯನ್ನು ಮಾಡಿ ಭಾವ ಲಿಂಗವನ್ನೂ ಧರಿಸಬೇಕು. ಆಗ ತಾನು ಬ್ರಹ್ಮ(ಲಿಂಗ), ಎಂಬುದು ಸಿದ್ಧವಾಗುತ್ತದೆ.

### ಪ್ರಮಾಣ

### ಲಿಂಗೋಪನಿಷತ್

ಶಿರಃ ಪೀಠಂ ಲಿಂಗಾತ್ಮಕಂ ಸರ್ವಂ ಶಾಂಭವೀ ವಿಗ್ರಹ ಉಚ್ಯತೇ, ಪ್ರಾಣಾದಿ ಲಿಂಗಸ್ವರೂಪಂ. ಗುರೋರ್ಲಿಂಗಂ, ಗುರು ಸಂಭವಾತ್ಮಕಂಲಿಂಗಂ

### ಭಾವಾರ್ಥ

ಶಿರಸ್ಸು ಲಿಂಗದ ವಾಸಸ್ಥಾನವು, ಸರ್ವವೂ ಲಿಂಗವನುಳ್ಳುದು, ಹೀಗಿರುವವನಿಗೆ ಶಂಭುವಿನ ವಿಗ್ರಹ ಎನ್ನುತ್ತಾರೆ. ಪ್ರಾಣಗಳೇ ಮೊದಲಾದುವು ಲಿಂಗ ಸ್ವರೂಪಗಳು, ಗುರುವಿನ ದೆಸೆಯಿಂದ ಲಿಂಗವನ್ನು ಪಡೆಯಬೇಕು. ಲಿಂಗವೂ ಗುರುವಿನಿಂದ ಹುಟ್ಟಿ ಆತ್ಮ ಸ್ವರೂಪವುಳ್ಳುದು

---

೩೯. ತೃಷೆ ಹಸಿವು ವ್ಯಸನಕ್ಕೆ ನಸಿದು ನಷ್ಟವನೆಯ್ದಿ
ವಿಸಕದಾ ಮಾಯೆ—ಬಲೆಯೊಳಗೆ ಸಿಲುಕಿರ್ದ
ಕೃಶ ಕುಕ್ಕುರ ನೀನು ಬ್ರಹ್ಮನೆ?

ತಾತ್ಪರ್ಯ

ಬಾಯಾರಿಕೆ, ಹಸಿವು, ವ್ಯಸನ ಇವುಗಳ ದೆಸೆಯಿಂದ ಸಣ್ಣವನಾಗಿ ಬಾಧೆಪಟ್ಟು, ಚಮತ್ಕಾರವುಳ್ಳ ಮಾಯೆಯ ಬಲೆಗೆ ಸಿಕ್ಕಿ, ಕೃಶನಾದ ನಾಯಿಯೇ, ನೀನು ಬ್ರಹ್ಮವೇನು?

ವಿಚಾರ

ಅದ್ವೈತಿಯು ತಾನು ಬ್ರಹ್ಮವೆಂದು ತಿಳಿದುಕೊಂಡಾಗ್ಯೂ

ಕ್ರಿಯಾದ್ವೈತಂ ನ ಕರ್ತವ್ಯಂ ಭಾವಾದ್ವೈತಂ ಸಮಾಚರೇತ್

ತಾತ್ಪರ್ಯ

ಬಳಸದಿರದ್ವೈತವನು ಬಾಹ್ಯದೊಳು । ನಿನ್ನೊಳಗೇಕೋ ಭಾವನೆ ಯೊಡಗೂಡು.

ಎಂಬ ಅಭಿಪ್ರಾಯವನ್ನಿಟ್ಟುಕೊಂಡು ಮಾಡುವ ಕ್ರಿಯೆಗಳನ್ನೆಲ್ಲಾ ಇತರ ಲೌಕಿಕರಂತೆ ಮಾಡುತ್ತಾನೆ. ಆದ್ದರಿಂದ ಆತನು ಕರ್ಮಗಳಲ್ಲಿ ಪ್ರಪಂಚದ ಮಾಯೆಯ ಬಲೆಗೆ ಸಿಕ್ಕಿಕೊಂಡಿರುತ್ತಾನೆ.

ಪ್ರಮಾಣ

ತೇಜೋ ಬಿಂದೂಪನಿಷತ್

೧ ನೆಯ ಅಧ್ಯಾಯ ಶ್ಲೋಕ ೪೨-೪೩

ಬ್ರಹ್ಮ ವೃತ್ತ್ಯಾ ಹಿ ಪೂರ್ಣತ್ವಂ ತಥಾ ಪೂರ್ಣತ್ವ ಮಭ್ಯಸೇತ್
ಯೇ ಹಿ ವೃತ್ತಿಂ ವಿಹಾಯ್ಯೆನಾಂ ಬ್ರಹ್ಮಾಖ್ಯಾಂ ಪಾವನೀಂ ಪರಾಂ
ವೃಥೈವ ತೇತು ಜೀವಂತಿ ಪಶುಭಿಶ್ಚ ಸಮಾ ನರಾಃ

ಭಾವಾರ್ಥ

ನಾನು ಬ್ರಹ್ಮನಿದ್ದೇನೆ ಎಂದು ಹೇಳುವವನು ಅದಕ್ಕೆ ಸರಿಯಾದ ಬ್ರಹ್ಮ ವೃತ್ತಿ ಯುಳ್ಳವನಾಗಬೇಕು ಬ್ರಹ್ಮವೃತ್ತಿಯೇ ಪೂರ್ಣತೆಯುಳ್ಳು ದು. ಈ ವೃತ್ತಿಯನ್ನು ಅವಲಂಬಿಸಿ ಪೂರ್ಣತೆಯನ್ನು ಅಭ್ಯಾಸ ಮಾಡ ಬೇಕು. ಈ ಪರಿಶುದ್ಧನಾದ ಮತ್ತು ಶ್ರೇಷ್ಠವಾದ ಬ್ರಹ್ಮ ವೃತ್ತಿಯನ್ನು ಬಿಟ್ಟುಯಾರು ಬದುಕುವರೋ ಅವರ ಜೀವನವು ವ್ಯರ್ಥ. ಅವರು ಪ ಶುವಿಗೆ ಸಮಾನರು.

---

೪೦. ಕಲ್ಲೊಳಗಣಾ ಕಿಚ್ಚು ಕಲ್ಲ ಸುಟ್ಟಂದಿಂಗೆ
ಎಲ್ಲರೊಳಗಿಪ್ಪ—ಶಿವಕಳೆಯಿಂ ಭವವಳಿದು
ಎಲ್ಲವುಂ ಬ್ರಹ್ಮವಹುದೈ ಸೆ

ತಾತ್ಪರ್ಯ

ಕಲ್ಲಿನೊಳಗಣ ಬೆಂಕಿಯು ಆ ಕಲ್ಲನ್ನು ಸುಟ್ಟು ಹೊರಬೀಳುವದು. (ಎರಡು ಕಲ್ಲುಗಳನ್ನು ಹೊಡೆದು ಬೆಂಕಿ ಏಳುವಾಗ ಆ ಕಲ್ಲುಗಳ ಭಾಗವು ಸುಟ್ಟಿರುತ್ತದೆ.) ಅದರ ಹಾಗೆ ಎಲ್ಲರಲ್ಲಿಯೂ ಇರುವ ಶಿವಕಳೆಯು ಭವವನ್ನು ನಾಶಮಾಡಿದಾಗ ಹೊರಪಡುವದು. ಆಗ ಎಲ್ಲವೂ ಬ್ರಹ್ಮವಾಗಿರುವದಲ್ಲವೇ?

ವಿಚಾರ

ತಾನುಮನುಷ್ಯರಂತೆ ವರ್ತನೆಯನ್ನಿಟ್ಟುಕೊಂಡು ತಾನು ಬ್ರಹ್ಮ ಎಂದು ಹೇಳಿದರೆ ಹೇಗೆ ಬ್ರಹ್ಮನಾಗುವನು? ಹಾಗೆ ಬರೀಮಾತಿನಲ್ಲಿ ಬ್ರಹ್ಮನಾದಾಗ ಉಳಿದವುಗಳೂ ಬ್ರಹ್ಮವಾಗುವದಿಲ್ಲ. ಮನುಷ್ಯಲಕ್ಷಣಗಳನ್ನು ಕಳೆದಾಗ ಶಿವಕಳೆಯು ಪ್ರಾಪ್ತವಾಗಿ ಆಮೇಲೆ ತಾನೂ ಬ್ರಹ್ಮ (ಶಿವ) ಎಲ್ಲವೂ ಬ್ರಹ್ಮ (ಶಿವ), ಆಗುತ್ತಾರೆ. ಆಮೇಲೆ ಬ್ರಹ್ಮನ ಲಕ್ಷಣದಂತೆ ನಡೆಯುಬೇಕು.

———

೪೧. ಕಾಷ್ಠದೊಳಿಹ ವಹ್ನಿ ಕಾಷ್ಠವನು ಸುಡದಂತೆ
ಶ್ರೇಷ್ಠ ಪ್ರಾಣೇಶ—ನೊಳಗಿರ್ದು ಫಲವೇನು?
ಕಷ್ಟ ಪರಿಭವವು ಕೆಡದನಕ

ತಾತ್ಪರ್ಯ

ಕಟ್ಟಿಗೆಯೊಳಗೆ ಇರುವ ಬೆಂಕಿಯು ಕಟ್ಟಿಗೆಯನ್ನು ಸುಡದೆ ಒಳಗೆ ತಾನು ಸುಮ್ಮನೆ ಇರುತ್ತದೆ. ಹಾಗೆಯೇ ಶ್ರೇಷ್ಠನಾದ ಪ್ರಾಣದ ಒಡೆಯನಾದ ಈಶ್ವರನು ಒಳಗಿದ್ದು ಪ್ರಯೋಜನವೇನು? ಕಷ್ಟವನ್ನು ಕೊಡುವಂಥಾ ಭವ (ತಿರುಗಿ ಹುಟ್ಟಿ ಬರುವಿಕೆ) ಕೆಡದೆ ಇರುವವರೆವಿಗೂ ಪ್ರಾಣೇಶನು ಪ್ರಸನ್ನನಾಗುವದಿಲ್ಲ.

ವಿಚಾರ

ಮನುಷ್ಯತನವನ್ನು ಕಳೆದೆನೆಂದು ಬಾಯಲ್ಲಿ ಹೇಳಿದರೆ ಆಗದು. ಹೃದಯದೊಳಗೆ ಈಶ್ವರನಿದ್ದಾನೆ, ಎಂದು ತಿಳಿದಮಾತ್ರಕ್ಕೆ ಹಾಗೆ ತಿಳಿದವನು ಈಶ್ವರನಾಗುವದಿಲ್ಲ. ಅದಕ್ಕೆ ತಕ್ಕ ಸಂಸ್ಕಾರವು ಬೇಕು. ಆ ಸಂಸ್ಕಾರದ ನಡತೆಯಿಂದ ಮನುಷ್ಯತ್ವವು ಸುಲಭವಾಗಿ ಬಿಡುಗಡೆಯಾಗಿ ತಾನು ಮಹಾದೇವನ ಸ್ವರೂಪನಾಗುತ್ತಾನೆ. ಆ ಸಂಸ್ಕಾರವೇ ಲಿಂಗ ಧಾರಣೆಯು, ದೇಹವು ಲಿಂಗವಾದರೆ ಒಳಗಿರುವ ಪ್ರಾಣವೂ ಲಿಂಗ ವಾಗುತ್ತದೆ.

ಸಾಕ್ಷಿ

ಆತ್ಮ ತತ್ವ ಪರಶ್ಚೈನ ಸರ್ವ ಜೀವೇಷು ಪೂಜ್ಯತೇ
ಆತ್ಮಾ ಜೀವಭಯಂ ಯಾತಿ ಭವ ಬಂಧ ನ ವರ್ಜಿತಃ

ಭವ ಬಂಧ ನ ವರ್ಜಿತಃ = ಭವ ಬಂಧವನ್ನು ತಪ್ಪಿಸಿಕೊಳ್ಳದವನು.

ಭಾವಾರ್ಥ

ಆತ್ಮ ತತ್ವದ (ಶಿವನ) ಕಡೆಗೆ ಗಮನವುಳ್ಳವನು ಸಮಸ್ತ ಜೀವರು ಗಳಿಂದ ಪೂಜಿಸಲ್ಪಡುತ್ತಾನೆ. ಭವ ಬಂಧವನ್ನು (ಮರಳಿ ಹುಟ್ಟುವ ದನ್ನು) ಬಿಡದೆ ಇದ್ದ ಆತ್ಮನು ಎಲ್ಲಾ ಜೀವರಿಗೆ ಇರುವಂತಹ (ಜೀವ ನಿಗೆ ತಗಲುವ) ಭಯವನ್ನು ಹೊಂದುತ್ತಾನೆ. ಅಥವಾ 'ಭವ' ಎಂಬ ಬಂಧನದಿಂದ ಬಿಡಲ್ಪಟ್ಟ ಆತ್ಮನು ಜೀವ ಭಯವನ್ನು ಹೋಗಲಾಡಿಸಿ ಕೊಂಡಿರುತ್ತಾನೆ.

---

೪೨. ಚತುರ್ಲಕ್ಷಾಶೀತಿ ಜೀವಾ ಆತ್ಮಾನಂಚ ಭಜಂತಿ ಹಿ
ಗುರುಲಿಂಗಂ ನ ಜಾನಂತಿ ತೇ ಯೋನಿಷು ಭವಂತಿಚ
ಭಕ್ತಿ ಮುಕ್ತಿ ಉಭೇ ನ ಸ್ತ ಇತಿ ಭೇದಮುಮೇಶೃಣು

ಭಾವಾರ್ಥ

ಶಿವನು ಹೇಳುತ್ತಾನೆ, ಪಾರ್ವತಿಯೇ ಕೇಳು.

ಎಂಭತ್ತು ನಾಲ್ಕು ಲಕ್ಷ ಜೀವರಾಶಿಗಳೂ ತಮ್ಮನ್ನು ತಾವು ಸ

ಖಪಡಿಸುತ್ತವೆ (ತಮ್ಮನ್ನೇ ಸೇವಿಸುತ್ತವೆ). ಅವು ಗುರು ಲಿಂಗವನ್ನು ತಿಳಿಯದಿದ್ದರೆ ಪುನಃ ಯೋನಿಯಲ್ಲಿ ಹುಟ್ಟುತ್ತವೆ. ಸದ್ಗುರುವನ್ನು ತಿಳಿಯದವನಿಗೆ ಭಕ್ತಿ ಮುಕ್ತಿ ಎರಡೂ ಇಲ್ಲ.

ವಿಚಾರ

ಪ್ರಾಣಿಗಳು ಈಶರೂಪಿಗಳು. ಆದರೆ ಅವು ಗುರುವನ್ನು ನಂಬದೆ ಮರಳಿ ಹುಟ್ಟಿ ಬರುತ್ತವೆ. ಆತ್ಮವೇ ಶ್ರೇಷ್ಠ ಎಂದು ಹೇಳುವ ಮನುಷ್ಯನೂ ಕೂಡಾ ಗುರುವನ್ನು ನಂಬಿ ಕ್ರಿಯೆಯಲ್ಲಿ ಆತ್ಮನಾಗದಿದ್ದರೆ (ಲಿಂಗವನ್ನು ಪಡೆಯದಿದ್ದರೆ) ಸಮರಸ ಭಕ್ತಿಯನ್ನು ತೋರಿಸುವುವಕ್ಕೆ ಅವಕಾಶವಿಲ್ಲ. ಭಕ್ತಿಯಿಲ್ಲದಿದ್ದರೆ ಮುಕ್ತಿಯೂ ಇಲ್ಲ.

ಪ್ರಮಾಣ

ಶರೀರೇಣ ಜಿತಾಃ ಸರ್ವೇ ಶರೀರಂ ಯೋಗಿಭಿರ್ಜಿತಂ
ತತ್ ಕಥಂ ಕುರುತೇ ತೇಷಾಂ ಸುಖದುಃಖಾದಿಕಂ ಫಲಂ

ಭಾವಾರ್ಥ

ಸರ್ವ ಪ್ರಾಣಿಗಳೂ ಶರೀರದಿಂದ ಗೆಲ್ಲಲ್ಪಟ್ಟವರು ಎಂದರೆ ಶರೀರದ ವಶರಾಗಿ ಇರುತ್ತಾರೆ. ಯೋಗಿಗಳು ಶರೀರವನ್ನು ಗೆದ್ದಿರುವರು. ಆದ್ದರಿಂದ ಶರೀರದ ಸುಖದುಃಖಗಳ ಫಲವು ಅವರಿಗೆ ಹೇಗೆ ಉಂಟಾಗುತ್ತದೆ?

ವಿಚಾರ

ಲಿಂಗಧಾರಿಯು ಶಿವಯೋಗಿಯಾಗಿರುತ್ತಾನೆ. ಗುರುವನ್ನು ನಂಬಿದವನೂ ಆಗಿರುತ್ತಾನೆ.

---

೪೩. ಇಂದು ರವಿ ಕಿರಣಗಳು ಬಂದು ಶಿಲೆಗಳ ಸೋಂಕೆ
ಮಂದೋಷ್ಣ ಶೈತ್ಯ—ವಪ್ಪಂತೆ ಸರ್ವರೊಳು
ಇಂದುಧರನಿಹನು ಇರದಂತೆ.

ತಾತ್ಪರ್ಯ

ಸೂರ್ಯ ಚಂದ್ರರ ಕಳೆಗಳು ಬಂದು ಸೂರ್ಯಕಾಂತಶಿಲೆ ಚಂದ್ರಕಾಂತ ಶಿಲೆಗಳಲ್ಲಿ ಕೂಡಿಕೊಂಡಿರಲು ಆ ಶಿಲೆಗಳು ಬಿಸಿ ಮತ್ತು ತಣ್ಣಗೆ ಇರು

ತ್ರವೆ. ಅದರಂತೆ ಎಲ್ಲರಲ್ಲಿಯೂ ಈಶ್ವರನಿರುತ್ತಾನೆ. ಇದ್ದಾಗ್ಯೂ ಕಾಣದಂತೆ ಅಡಗಿರುವನು.

ಸಾಕ್ಷಿ

ಅರ್ಕೇಂದು ಕಿರಣಾ ಭಾಸಾಚ್ಛಿಲಾ ಮಂದೋಷ್ಣ ಶೀತಲಾ
ಯದ್ವದಾತ್ಮಸು ಸರ್ವೇಷು ಶಿವಸ್ತಿಷ್ಠತಿ ಕೇವಲಃ

ಭಾವಾರ್ಥ:— ಮೇಲಿನ ತಾತ್ಪರ್ಯದಂತೆ.

ವಿಚಾರ

ಒಂದು ಪದಾರ್ಥವನ್ನು ಬಿಸಲಿಗೆ ಕಾಸಿದರೆ ಬಿಸಿಯೂ, ಬೆಳದಿಂಗಳಲ್ಲಿ ಇಟ್ಟರೆ ತಣ್ಣಗೂ ಆಗುವದರಿಂದ ಆ ಕಿರಣಗಳು ಆ ಪದಾರ್ಥದಲ್ಲಿ ವ್ಯಾಪಿಸಿರುವವೆಂದು ಹೇಗೆ ತಿಳಿಯಲಿಕ್ಕೆ ಬರುತ್ತದೆಯೋ ಹಾಗೆಯೇ ಸೂರ್ಯಕಾಂತ ಚಂದ್ರಕಾಂತ ಶಿಲೆಗಳೂ ಬಹಳ ಬಿಸಿಯಾಗಿಯೂ ಮತ್ತು ತಣ್ಣಗೂ ಇರುವದರಿಂದ ಅವುಗಳಲ್ಲಿ ಆ ಕಿರಣಗಳ ಪ್ರವೇಶವಾಗಿದೆ ಎಂತ ತಿಳಿಯಲಿಕ್ಕೆ ಬರುತ್ತದೆ. ಇದರಂತೆ ಪರಬ್ರಹ್ಮನಲ್ಲಿ ಇರುವ ಸತ್ತು ಚಿತ್ತು ಆನಂದ ಎಂಬ ಗುಣಗಳು ಮನುಷ್ಯನಲ್ಲಿ ಕೂಡಿರುವದರಿಂದ ಆ ಗುಣಗಳುಳ್ಳ ಪರವಸ್ತುವಿದ್ದಾನೆ, ಎಂದು ತಿಳಿಯಲಿಕ್ಕೆ ಬರುತ್ತದೆ.

---

೪೪. ಅರ್ಕೇಂದು ಶಿಲೆಗಳಲಿ ಅರ್ಕೇಂದು ಬಿಂಬಿಸಲು
ತೋರ್ಕುವ ಜಲವಗ್ನಿ—ಯುವಲಂತೆ ಭಕ್ತರೊಳ
ಗಿರ್ಕುವ ಪರತತ್ವ ಇದು ಸತ್ಯ.

ತಾತ್ಪರ್ಯ

ಸೂರ್ಯಕಾಂತ ಚಂದ್ರಕಾಂತ ಶಿಲೆಗಳಲ್ಲಿ ಸೂರ್ಯ ಚಂದ್ರರು ಬಿಂಬಿಸಿದ್ದೇ ಆದರೆ ಉರಿಯೂ ನೀರೂ ಉಂಟಾಗಿ ತೋರಿಬರುವಂತೆ ಭಕ್ತರಲ್ಲಿ ಇರುವ ಪರಾತ್ಪರ ವಸ್ತುವಾದ ಶಿವನು ತೋರಿಬರುತ್ತಾನೆ.

ವಿಚಾರ

ಸ್ವಭಾವವಾಗಿ ಬಿಸಿ, ಮತ್ತು ತಂಪಾಗಿದ್ದ ಸೂರ್ಯ ಚಂದ್ರಕಾಂತ ಶಿಲೆಗಳಿಗೆ ಸೂರ್ಯ ಮತ್ತು ಚಂದ್ರರ ಕಿರಣಗಳು ಬಿದ್ದಕೂಡಲೇ ಉರಿಯೂ, ನೀರೂ ಹೊರಗೆ ತೋರಿಬರುತ್ತವೆ. ಅದರಂತೆ ಗುರು ಕೃಪೆಯು ಬಿಂಬಿಸಿದ್ದರ ದೆಸೆಯಿಂದ ಭಕ್ತನ ಅಂತರಂಗದಲ್ಲಿರುವ ಸಚ್ಚಿದಾ

ನಂದ ರೂಪನಾದ ಪರಬ್ರಹ್ಮನು ಎದುರಿಗೆ ಕಾಣುವಂತೆ ಲಿಂಗ ರೂಪನಾಗಿ ಹೊರಗೆ ತೋರುತ್ತಾನೆ.

ಸಾಕ್ಷಿ ೧

ಸೋಮ ಸೂರ್ಯಾಂ ಶು ಸಂಪರ್ಕಾ ತ್ತಚ್ಛಿಲೇ ಸಲಿಲಾನಲಾ
ಉದ್ಗಿರಂತ್ಯೌ ಯಥಾ ಭಕ್ತ ಜನೇ ಜ್ಞಾನಂಭವೇಚ್ಛಿವಾತ್

ಭಾವಾರ್ಥ

ಚಂದ್ರ ಸೂರ್ಯರ ಕಿರಣಗಳು ಒಂದು ಮುಟ್ಟುವದರಿಂದ ಹೇಗೆ ಆಯಾ ಶಿಲೆಗಳಲ್ಲಿ ನೀರೂ ಉರಿಯೂ ಹೊರಗೆ ಬರುತ್ತವೆಯೋ ಹಾಗೆ ಶಿವನ ದೆಸೆಯಿಂದ ಭಕ್ತ ಜನರಲ್ಲಿ ಜ್ಞಾನವು ಹೊರಗೆ ಬರುತ್ತದೆ.

ವಿಚಾರ

ಶಿವಜ್ಞಾನವುಳ್ಳ ಗುರುವಿನ ಹಸ್ತ ಮಸ್ತಕ ಸಂಯೋಗದಿಂದ ಆ ಶಿವಜ್ಞಾನವು ಲಿಂಗ ರೂಪವಾಗಿ ಹೊರಗೆ ಬರುತ್ತದೆ. ಹಾಗಲ್ಲದೆ ತನ್ನಷ್ಟಕ್ಕೆ ತಾನೇ ಹೊರಬೀಳುವದಿಲ್ಲ.

ಸಾಕ್ಷಿ ೨

ಶೃತಿ: ಅರ್ಕಚಂದ್ರೇಷು. ಸರ್ವ ಶೈಲಾ ......... ಯಸ್ಯಸಾ್ಯಜ್ಜಗಮೆಕಃಸ್ಯಾತ್.......ಶ್ಟನ್ ಪುನಃ ಸತತಂ ತತ್ ಕಾರಿಣ್ಯೋ...........

(ಈ ಸಾಕ್ಷಿಯು ಒಂದು ಪ್ರತಿಯಲ್ಲಿ ಮಾತ್ರ ಇದೆ. ಇದು ಅಪೂರ್ಣವಾಗಿ ಇರುತ್ತದೆ. ಇದರ ಭಾವಾರ್ಥವನ್ನು ಕೊಡಲು ಅನುಕೂಲವಿಲ್ಲ.)

---

೪೫. ವೃಕ್ಷದಿಂದಾದೆಲೆಯೊಳ್ ವೃಕ್ಷ ತಾನಿಪ್ಪುದೇ
ವೃಕ್ಷದಾಬೀಜ—ದೊಳು ವೃಕ್ಷ ವಿಪ್ಪಂತೆ
ಅಕ್ಷಿತ್ರಯನಿರ್ಪ ಭಕ್ತರೊಳು

ತಾತ್ಪರ್ಯ

ಒಂದು ಮರದಿಂದ ಉಂಟಾದ ಎಲೆಯಲ್ಲಿ ಮರವಿರುತ್ತದೆಯೇನು? ಆ ಮರದ ಬೀಜದಲ್ಲಿ ಮರವು ಅಡಗಿರುತ್ತದೆ.

ವಿಚಾರ

ಎಲೆಯು ಮರದ ಒಂದು ಭಾಗವಾಗಿಪ್ಪು ಅದು ಮರದ ಎಲ್ಲಾ

ಭಾಗವನ್ನೂ ಗ್ರಹಿಸದೆ ಇದ್ದದ್ದರಿಂದ ಅದು ಮರವೆನಿಸಿಕೊಳ್ಳುವದಿಲ್ಲ. ಇದರಂತೆ ಸರ್ವವೂ ಶಿವ ಎಂದು ನಂಬದೆ ಕೆಲವು ಭಾಗದಲ್ಲಿ ಶಿವನಿರುವನೆಂದು ನಂಬುವವರಲ್ಲಿ ಶಿವನು ಪೂರ್ಣತೆಯಲ್ಲಿ ಇರುವದಿಲ್ಲ. ಬೀಜವು ಮರದ ಎಲ್ಲಾ ಭಾಗವನ್ನೂ ಸೂಕ್ಷ್ಮವಾಗಿ ಗ್ರಹಿಸಿಕೊಂಡಿರುವದರಿಂದ ಅದರಲ್ಲಿ ಮರವಿರುತ್ತದೆ. ಹಾಗೆಯೇ ತನ್ನ ದೇಹ ಇಂದ್ರಿಯಗಳ ಸಮೇತವಾಗಿ ಎಲ್ಲವುಗಳಲ್ಲಿಯೂ ಶಿವನನ್ನು ಗ್ರಹಿಸಿಕೊಂಡಿರುವವರಲ್ಲಿ ಶಿವನು ಇರುತ್ತಾನೆ.

ಸಾಕ್ಷಿ

ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ
ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ

ಭಾವಾರ್ಥ

ಶಿವನು ಪಾರ್ವತಿಗೆ ಹೇಳುತ್ತಾನೆ:—

ನಾನು ಕೈಲಾಸದಲ್ಲಿ ವಾಸವಾಡುವದಿಲ್ಲ, ಮೇರುವಿನಲ್ಲಿ ಅಥವಾ ಮಂದರ ಪರ್ವತದಲ್ಲಿ ಇಲ್ಲ. ನನ್ನ ಭಕ್ತರು ಎಲ್ಲಿರುವರೋ ನಾನು ಅಲ್ಲಿಯೇ ಇರುವೆನು.

---

೪೬. ದೇಹ ದೇಗುಲವೆಂಬೆ ದೇಹಿಕನೆ ಶಿವನೆಂಬೆ
ದೇಹ ವೆಂಬತ್ತು—ನಾಲ್ಕು ಲಕ್ಷವ ತೊಟ್ಟ
ಜೀವಿ ನೀನೆಂತು ಬ್ರಹ್ಮವೈ

ತಾತ್ಪರ್ಯ

ದೇಹವು ದೇವಸ್ಥಾನವೆಂತಲೂ ಆ ದೇಹದೊಳಗಿರುವ ದೇಹಿಯು (ಜೀವನು) ಶಿವನೆಂತಲೂ ಹೇಳುತ್ತೀ, ಆ ಜೀವನು ಎಂಭತ್ತುನಾಲ್ಕು ಲಕ್ಷ ದೇಹವನ್ನು ತೊಟ್ಟಿರುತ್ತಾನೆ. ಹೀಗಿರುವ ಜೀವನು ಹೇಗೆ ಬ್ರಹ್ಮನಾಗುವನು?

ವಿಚಾರ

ಇದು ಶೈವ ಸಿದ್ಧಾಂತಿಗಳಿಗಾಗಿ ಹೇಳಲ್ಪಟ್ಟದ್ದು. ಇವರ ಅಭಿಪ್ರಾಯದಂತೆ ದೇಹವನ್ನು ದೇವಸ್ಥಾನವೆಂದೂ, ಜೀವನನ್ನು ಶಿವನೆಂದೂ ನಂಬಿದಾಗ ಜೀವನಿಗೂ ದೇಹಕ್ಕೂ ಭಿನ್ನತ್ವವು ತೋರುವದರಿಂದ ಈ ಸಿದ್ಧಾಂತಿಗಳ ಅದ್ವೈತವೂ ಸಿದ್ಧಿಯಾಗುವದಿಲ್ಲ.

ಪ್ರಮಾಣ

ಸ್ಕಂದೋಪನಿಷತ್:—ಶ್ಲೋಕ ೧೦
ದೇಹೋ ದೇವಾಲಯ: ಪ್ರೋಕ್ತಃ ಸಜೀವ: ಕೇವಲ: ಶಿವಃ
ತ್ಯಜೇದಜ್ಞಾನ ನಿರ್ಮಾಲ್ಯಂ—ಸೋಹಂ ಭಾವೇನ ಪೂಜಯೇತ್

ಭಾವಾರ್ಥ

ದೇಹವು ದೇವಾಲಯವು, ಜೀವನು ಶಿವನು ಎಂದು ಹೇಳಲ್ಪಟ್ಟಿರುತ್ತದೆ. ಶಿವನು ನಿರ್ಮಲನು, ದೇಹವು ನಿರ್ಮಲವಲ್ಲದ್ದೆಂದು ತಿಳಿದು, ನಿರ್ಮಲನಾದ ಶಿವನನ್ನು ಪೂಜಿಸಿ ನಿರ್ಮಾಲ್ಯವನ್ನು ಪಡೆಯಬೇಕು, ಎಂಬ ತಿಳಿವಳಿಕೆಯು ಅಜ್ಞಾನವಾಗಿದೆ. ಇದನ್ನು ಬಿಡಬೇಕು. ದೇಹಸಹಿತವಾಗಿ ನಾನು ಶಿವನೆಂದು ಭಾವಿಸಿ, ಪೂಜಿಸಬೇಕು. ದೇಹಸ್ವರೂಪನಾದ ಶಿವನೇ ಲಿಂಗವು. ( ಮೈತ್ರೇಯಿ ಉಪನಿಷತ್ತಿನ ೩೧ನೆಯ ಶ್ಲೋಕವೂ ಇದೇನೇ )

---

೪೭. ಬ್ರಹ್ಮತಾನೆಂಬೊಡೆಯು, । ಬ್ರಹ್ಮದಂತಿರಬೇಕು
ಜನ್ಮಜರೆಮರಣ, —ರುಜೆಯಡಸಿ ಸಾವನಕ
ಬ್ರಹ್ಮವೆಂದೆಂಬುದದು ಪುಸಿಯು ।

ತಾತ್ಪರ್ಯ

ತಾನು ಬ್ರಹ್ಮನಾದರೆ ಬ್ರಹ್ಮದ ಹಾಗೆ ಇರಬೇಕು. ಹುಟ್ಟುವದು, ಮುದಿತನ, ಮರಣ, ರೋಗ ವ್ಯಾಪಿಸುವುದು, ಸಾಯುವುದು ಇವುಗಳನ್ನು ಇಟ್ಟುಕೊಂಡು ನಾನು ಬ್ರಹ್ಮ ಎಂಬುದು ಸುಳ್ಳು

ವಿಚಾರ

ಒಬ್ಬ ಅದ್ವೈತಿಯು ತನ್ನ ಜೀವವು ಬ್ರಹ್ಮನೆಂದು ಹೇಳಿಕೊಂಡು ತನ್ನ ದೇಹವನ್ನು ಇತರ ಮನುಷ್ಯರಂತೆ ಲೌಕಿಕಸ್ಥಿತಿಯಂತೆಯೇ ಬಿಟ್ಟಿರುತ್ತಾನೆ. ಇದರಿಂದ ಅವನ ದೇಹಕ್ಕೆ ಜನನ ಮರಣಗಳುಂಟು. ಆದ್ದರಿಂದ ಅವನು ಬ್ರಹ್ಮನಾಗುವದಿಲ್ಲ.

ಪ್ರಮಾಣ

ಮೈತ್ರೇಯಿ ಉಪನಿಷತ್ ಶ್ಲೋಕ ೨೨

ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೇ
ಪ್ರತಿಬಿಂಬಿತ ಶಾಖಾಗ್ರ ಫಲಾಸ್ವಾದನ ಮೋದವತ್

ಭಾವಾರ್ಥ

ದಡ್ಡನು ಬ್ರಹ್ಮದ ಅನುಭವವಿಲ್ಲದೆ ಸುಮ್ಮನೆ ತಾನು ಬ್ರಹ್ಮವೆಂದು ಹೇಳಿ ಸಂತೋಷಿಸುತ್ತಾನೆ. ಮರದಶಾಖೆಯ ಕೊನೆಯಲ್ಲಿ ಇರುವ ಹಣ್ಣಿನ ನೆರಳಿನರುಚಿನೋಡಿ ಸಂತೋಷಪಡುವಹಾಗೆ.

---

೪೮. ಬಿದ್ದ ಭವಪಾಶದಲಿ । ಇದ್ದ ಪ್ರಪಂಚಿನಲಿ
ಹೊದ್ದಿಲ್ಲವೆಂದು—ಅದ್ವೈತವನು ನುಡಿವ
ಬದ್ಧ ಭವಿ ಶುದ್ಧ ಭವಭಾರಿ.

ತಾತ್ಪರ್ಯ

ತಿರುತಿರುಗಿ ಹುಟ್ಟುವ ಪಾಶದಲ್ಲಿ ಇದ್ದು, ಪ್ರಪಂಚದಲ್ಲಿ ಸೇರಿಲ್ಲ ವೆಂದು ಅದ್ವೈತವನ್ನು ಹೇಳುವವನು ಆದರಂತೆ ನಡೆಯಲಾರದೆ ಭವಕ್ಕೆ ಕಟ್ಟುಬಿದ್ದವನು, ಮತ್ತು ಭವದ ಭಾರವನ್ನು ಹೊತ್ತುಕೊಂಡವನು ಆಗಿದ್ದಾನೆ.

ವಿಚಾರ.

ಭವವು ಹೋಗಬೇಕಾದರೆ ತಾನು ಮನುಷ್ಯನಾಗಬಾರದು. ಬ್ರಹ್ಮ ನಾಗಬೇಕು. ಅದ್ವೈತಿಯು ಬ್ರಹ್ಮನಾದೆನೆಂದು ಹೇಳುತ್ತಾ ಕೆಲಸದಲ್ಲಿ ಮನುಷ್ಯರಂತೆ ನಡೆದಾಗ್ಯೂ ಪ್ರಪಂಚವೇ ಸುಳ್ಳಾದ್ದರಿಂದ ಇದು ಸುಳ್ಳಾದ ನಡತೆ ಎನ್ನುತ್ತಿದುವನು. ಆದ್ದರಿಂದ ಇವನು ಪೂರ್ಣ ಬ್ರಹ್ಮನಲ್ಲ. ಇವ ನಿಗೆ ಭವವು ಬಂದೇ ಬರುತ್ತದೆ.

ಯೋಗ ಶಿಖೋಪನಿಷತ್

ವಿರಕ್ತಾ ಜ್ಞಾನಿನಶ್ಚಾನ್ಯೇ ದೇಹೇನ ವಿಜಿತಾ: ಸದಾ
ತೇ ಕಥಂ ಯೋಗಿಭಿಸ್ತುಲ್ಯಾ ಮಾಂಸಪಿಂಡಾ: ಕುದೇಹಿನ:

ಭಾವಾರ್ಥ

ವಿರಕ್ತರೂ (ಪ್ರಾಪಂಚಿಕ ವೈರಾಗ್ಯವುಳ್ಳವರೂ) ಜ್ಞಾನಿಗಳೂ (ಅಹಂ ಬ್ರಹ್ಮಾಸ್ಮಿ ಎಂಬ ಬ್ರಹ್ಮಜ್ಞಾನವುಳ್ಳವರೂ) ಆದ ಕೆಲವರು ದೇಹದಿಂದ ಗೆಲ್ಲಲ್ಪಟ್ಟವರಾಗಿದ್ದಾರೆ ಎಂದರೆ ದೇಹದ ವಶರಾಗಿ ಕೆಲಸವಾ ಡುತ್ತಾರೆ. ಅವರು ಮಾಂಸಪಿಂಡರು ಮತ್ತು ಕೆಟ್ಟದಾದ ದೇಹವುಳ್ಳ ವರು- ಇಂಥವರು ಬ್ರಹ್ಮದೊಡನೆ (ಶಿವನೊಡನೆ) ಯೋಗವನ್ನು ಹೊಂದಿದ (ಕೂಡಿದ) ಯೋಗಿಗೆ ಹೇಗೆ ಸಮಾನರಾಗುತ್ತಾರೆ?

---

೪೯. ಅದ್ವೈತ ನಿನಗೇಕೆ | ಬಿದ್ದೇಕೆ ಭವದೊಳಗೆ
ಹೊದ್ದಿ ತ್ರೈಮಲ—ದೊಳಿದ್ದಿರ್ಪ ಬ್ರಹ್ಮದ
ಸುದ್ದಿ ನಿನಗೇಕೆ ಭವಬದ್ಧ ?

ತಾತ್ಪರ್ಯ

ಜನ್ಮಮರಣಗಳಲ್ಲಿ ಕಟ್ಟಲ್ಪಟ್ಟ ಮಾತಿನ ಅದ್ವೈತಿಯೇ? ನಿನಗೆ ಏತಕ್ಕೆ ಅದ್ವೈತ? ಅದ್ವೈತವನ್ನು ಹೇಳುತ್ತಾ ಭವದಲ್ಲಿ ಬಿದ್ದೆ ಏತಕ್ಕೆ? ನೀನು ಆಣವಮಲ ಮಾಯಾಮಲ ಕಾರ್ಮಿಕ ಮಲಗಳೆಂಬ ಮೂರು ಮಲಗ ಳಲ್ಲಿ ಮುಳುಗಿದ್ದೂ ಬ್ರಹ್ಮದ ಸುದ್ದಿಯು ನಿನಗೇತಕ್ಕೆ?

ವಿಚಾರ.

ಬರಿಮಾತಿನ ಅದ್ವೈತಿಯು ನಾನು ಬ್ರಹ್ಮನಾದೆನೆಂದು ಹೇಳಿದರೂ ಕಾರ್ಯದಲ್ಲಿ ಬ್ರಹ್ಮನಾಗಿಲ್ಲ. ಈ ಜನ್ಮದಲ್ಲಿ ಅವನಿಗೆ ಮಾಯಾ ಸಂಬಂಧವಿಲ್ಲ ವೆಂದು ತಿಳಿಯಲಿಕ್ಕೆ ಬರುವದಿಲ್ಲ. ಒಂದು ವೇಳೆ ಹಾಗೆ ತಿಳಿದರೂ ಹಿಂದಿನ ಜನ್ಮದಲ್ಲಿ ಅವನು ಮಾಡಿದ ಕರ್ಮದ ಫಲವು ಅವನಿಗೆ ಕಾರ್ಮಿಕ ಮಲವಾಗಿಯೂ, ತಂದೆತಾಯಿಗಳ ಸಂಬಂಧದಿಂದ ಬಂದವನಾದ್ದರಿಂದ ಹಿಂದಿನ ಆ ಸಂಬಂಧವು ಆಣವಮಲವಾಗಿಯೂ, ಪ್ರಕೃತಿ ವಸ್ತುಗಳಿಂದ ಇವನ ದೇಹವಾಗಿರುವದರಿಂದ ಆ ಸಂಬಂಧವು ಮಾಯಾಮಲವಾ ಗಿಯೂ ಇವನಿಗೆ ಮೊದಲೇ ಅಂಟಿಕೊಂಡಿರುತ್ತದೆ ಈ ಮೂರು ಮಲಗ ಳನ್ನೂ ದೂರ ಮಾಡುವದಕ್ಕೆ ಸಾಧನವಾದ ದೇಹ ಶುದ್ಧಿಯಾಗುವ

ದೀಕ್ಷೆಯು ಇವನಿಗೆ ಇಲ್ಲ. ಆದ್ದರಿಂದ ಇವನಿಗೆ ಅದ್ವೈತದ ಸುದ್ದಿಯೂ ಕೂಡಾ ಪ್ರಯೋಜನವಿಲ್ಲ.

---

೫೦. ಲಿಂಗ ನೀನಾದೊಡೆಯು | ಹೀಂಗೇಕೆ? ಪಿತಮಾತೆ
ಸಂಗದಿಂ ಜನಿಸಿ—ತ್ರೈಮಲವ ಭುಂಜಿಸುವ
ಮಂಗ ನೀ ಹೇಂಗೆ ಬ್ರಹ್ಮವೈ ?
ಹೀಂಗೆ=ಹೀಗೆ

ತಾತ್ಪರ್ಯ

ಎರಡಿಲ್ಲವೆಂದು ಮಾತಿನಲ್ಲಿ ಹೇಳುವವನೇ! ನೀನು ಬ್ರಹ್ಮನಾದರೆ ಹೀಗೆ ಏಕೆ ನಡೆಯುತ್ತೀ? ತಂದೆ ತಾಯಿಗಳ ಸಂಗದಿಂದ, ಹುಟ್ಟಿ ಅವರ ಮಗನಾಗಿ ನೀನು ನಡೆಯುತ್ತೀ, ಇದರಿಂದ ಮೂರು ಮಲದೊಳಗಿನ ಆಣವ ಮಲವು ನಿನಗೆ ಬಿಡಲಿಲ್ಲ. ಇದಲ್ಲದೆ ಹೊನ್ನು ಹೆಣ್ಣು ಮಣ್ಣು ಗಳಲ್ಲಿ ಎಲ್ಲಾ ಮನುಷ್ಯರಂತೆ ನಡೆಯುತ್ತೀ, ಆದ್ದರಿಂದ ಈ ಮೂರು ಮಲಗಳನ್ನು ನೀನು ಉಣ್ಣುವೆ. ಆದ್ದರಿಂದ ನಿನಗೆ ದ್ವೈತ (ಎರಡು) ಹೇಗೆ ತಪ್ಪಿತು? ಛೀ ಮಂಗ, ನೀನು ಹೇಗೆ ಬ್ರಹ್ಮ?

ವಿಚಾರ.

ವೀರಶೈವ ದೀಕ್ಷೆ ಪಡೆಯುವದರಲ್ಲಿ ತಾನು ಲಿಂಗಸ್ವರೂಪನಾಗುವದಲ್ಲದೆ ಮೂರುಮಲಗಳೂ ಇಲ್ಲದಂತಾಗುವನು. ಮತ್ತು ಲೌಕಿಕರಂತೆ ವ್ಯವಹಾರವೂ ತಪ್ಪಿ ಬ್ರಹ್ಮನಾಗಿ ನಡೆಯುವ ವರ್ತನವು ಬರುತ್ತದೆ. ಇಂಥಾ ದೀಕ್ಷೆ ಇಲ್ಲದಿರುವದರಿಂದ ಮಾತಿನಲ್ಲಿ ಎರಡಿಲ್ಲವೆಂದು ಹೇಳುವವನು ಮಾತಿನ ಬ್ರಹ್ಮನೇ ಹೊರತು ನಿಜವಾಗಿ ಬ್ರಹ್ಮನಲ್ಲ.

ಅದ್ವೈತಿಯಾಗಿ ತನ್ನ ತಂದೆಯು ಮಗನೆಂದು ತಿಳಿದುಕೊಂಡಿದ್ದರೆ ಅಥವಾ ಮೂಲದಲ್ಲಿ ಋಷಿವಂಶದವನೆಂದು ತಿಳಿದರೆ, ಅದ್ವೈತವು ಬಂದು ತಾಗುತ್ತದೆ. ಬಾಯಿಮಾತಿನಲ್ಲಿ ನಾನು ಬ್ರಹ್ಮ(ಲಿಂಗ)ಎಂದು ಹೇಳಿದವನಿಗೆ ತಂಡೆತಾಯಿಯ ಸಂಬಂಧದಿಂದ ಆದ ದೇಹಕ್ಕೆ ಸಂಸ್ಕಾರವೇನೂ ಇಲ್ಲದಿರುವದರಿಂದ ಮಲಗಳು ಆತನಿಗೆ ಬಿಟ್ಟಿರುವದಿಲ್ಲ.

೫೧. ಪಾಶ ಬದ್ಧನು ಜೀವ | ಪಾಶ ಮುಕ್ತನು ಶಿವನು
ಪಾಶ ತ್ರಿ ಪಂಚ—ನವಪಾಶ ದೊಳಗಿರ್ದು
ಈಶನೆಂತಾದೆ? ಪಾಷಂಡಿ

ತಾತ್ಪರ್ಯ

ಪಾಷಂಡಿಯೇ ( ಭವದಲ್ಲಿ ಬರುವವನೇ ), ಜೀವನು ಸಂಸಾರವೆಂಬ ಹಗ್ಗ ( ಪಾಶ ) ದಿಂದ ಕಟ್ಟಲ್ಪಟ್ಟವನು. ಶಿವನು ಅಂಥಾ ಪಾಶವಿಲ್ಲದವನು ಪಾಶಗಳು ಮೂರು (ಕುಲ, ಶೀಲ, ಛಲ)ಅಂತರಂಗದಪಾಶಗಳು ೫ (ಮಲ, ಕರ್ಮ, ಮಾಯಾ. ಬಿಂದು, ಶಕ್ತಿ) ಇನ್ನೊಂದು ವಿಧದಲ್ಲಿ ಅಂತರಂಗದ ಪಾಶಗಳು ಒಂಭತ್ತು (ದಯೆ, ಶಂಕೆ, ಭಯ, ಲಜ್ಜೆ, ಜಿಗುಪ್ಸೆ, ಆಶೆ, ಕ್ಲೇಶ, ಮೋಹ, ಭವ ) ಹೀಗಿರುವ ಪಾಶದೊಳಗಿದ್ದು ನೀನು ಈಶನು ಹೇಗೆ ಆದೆ ?

ವಿಚಾರ

ಪಾಶುಪತರ ತಿಳಿವಳಿಕೆಯ ಪ್ರಕಾರ ಈ ಪಾಶ ( ಹಗ್ಗ ) ಗಳು ಉಂಟೆಂಬ ಭಾವನೆ. ತಕ್ಕ ಕಾರ್ಯ ಮಾಡದೆ ಇವು ಹರಿಯತಕ್ಕವುಗಳಲ್ಲ. ಬ್ರಹ್ಮನಾದೆನೆಂಬ ಬರಿಯಮಾತಿನಿಂದ ಈ ಹಗ್ಗಗಳು ಹರಿಯುವದಿಲ್ಲ. ಮತ್ತು ಪಾಶವು ತಾನಾಗಿ ಬಿಡುಗಡೆಯಾಗಬೇಕೆಂಬ ಸಿದ್ಧಾಂತವೂ ಸರಿಯಲ್ಲ.

ಸಾಕ್ಷಿ

ಜೀವಶ್ಶಿವ ಶ್ಶಿವೋ ಜೀವಃ ಸ ಜೀವಃ ಕೇವಲಃ ಶಿವ:
ಪಾಶಬದ್ಧೋ ಭವೇಜ್ಜೀವಃ ಪಾಶಮುಕ್ತಸ್ಸದಾಶಿವ:

ಭಾವಾರ್ಥ

ಜೀವನು ಶಿವನು, ಶಿವನು ಜೀವನು, ಆ ಜೀವನು ಕೇವಲ ಶಿವನು, ಎಂದರೆ ಆ ಜೀವನೇ ಶಿವನು. ಆದರೆ ಪಾಶಬದ್ಧನಾದವನು ಜೀವನಾಗುವನು. ಪಾಶದಿಂದ ಬಿಡುಗಡೆ ಹೊಂದಿದವನು ಸದಾಶಿವನು.

ವಿಚಾರ

ಅದ್ವೈತಿಯು ತಾನು ಬ್ರಹ್ಮ ಎಂದು ಹೇಳಿದ ಮಾತ್ರಕ್ಕೆ ಈ ಪಾಶಗಳ ಬಿಡುಗಡೆಯು ಆಗುವದಿಲ್ಲ. ಪಾಶುಪತರಾದರೂ ತಮ್ಮ ಪಾಶಗಳನ್ನು

ಕಳೆದುಕೊಳ್ಳಲು ಆರು ಅಧ್ವಗಳ ಶುದ್ಧಿಯ ಮೂಲಕ ದೀಕ್ಷೆಯನ್ನು ಪಡೆಯಬೇಕು.

---

೫೨. ಬ್ರಹ್ಮಕ್ಕೆ ಭವಭೀತಿ | ಬ್ರಹ್ಮಕ್ಕೆ ಹಗಲಿರುಳು
ಬ್ರಹ್ಮಕ್ಕೆ ಹಸಿವು—ಬಲು ನಿದ್ರೆ ನೀರಡಿಕೆ
ಬ್ರಹ್ಮಕ್ಕೆ ಉಂಟೇ? ಅಜ್ಞಾನಿ.

ತಾತ್ಪರ್ಯ

ಅಜ್ಞಾನಿಯೇ, ಬ್ರಹ್ಮಕ್ಕೆ ಪ್ರಾಣಿಯಾಗಿ ಹುಟ್ಟುವ ಹೆದರಿಕೆಯು, ಬ್ರಹ್ಮಕ್ಕೆ ಹಗಲು ರಾತ್ರಿಯು, ಬ್ರಹ್ಮಕ್ಕೆ ಹಸಿವು ನಿದ್ರೆ ನೀರಡಿಕೆಗಳು ಉಂಟೇನು ?

ವಿಚಾರ

ಬರಿಯ ಮಾತಿನ ವೇದಾಂತಿಯು ತಾನು ಬ್ರಹ್ಮನೆಂದು ಹೇಳಿದರೂ ಇತರ ಮನುಷ್ಯರಂತೆ ಹಸಿವು ನೀರಡಿಕೆ ಮೊದಲಾದವುಗಳನ್ನು ಹೊಂದುತ್ತಾನೆ. ಬ್ರಹ್ಮನಾದ ಮೇಲೆ ಬ್ರಹ್ಮರೂಪವಾದ ಪ್ರಸಾದವನ್ನು ಹೊಂದುವದಿಲ್ಲ. ಪ್ರಸಾದವನ್ನು ಹೊಂದುವ ಲಕ್ಷಣವೇ ಇವನಿಗೆ ತಿಳಿಯದು. ಅದ್ದರಿಂದ ಇವನು ಅಜ್ಞಾನಿಯು. ನಿದ್ರೆಯನ್ನೂ ಕೂಡಾ ಬ್ರಹ್ಮ ಸ್ವರೂಪದಲ್ಲಿ ನಡೆಸುವ ಭಾವನೆಯ ಆಚಾರವು ಬಂದರೆ ಅದ್ವೈತದ ನಿಜವಾದ ಸಿದ್ಧಿಯು ದೊರೆಯುತ್ತದೆ.

---

೫೩. ಬ್ರಹ್ಮಕ್ಕೆ ಪಿತಮಾತೆ । ಬ್ರಹ್ಮಕ್ಕೆ ಸತಿಸುತರು
ಬ್ರಹ್ಮಕ್ಕೆ ಜಾತಿ,—ವರ್ಣವು ಕುಲಾಶ್ರಮವು
ಬ್ರಹ್ಮಕ್ಕೆಲ್ಲಿಹುದೊ ವಾಗ್ವಾದಿ

ತಾತ್ಪರ್ಯ

ಮಾತಿನ ಹರಟೆಕಾರನೇ, ಬ್ರಹ್ಮಕ್ಕೆ ತಾಯಿತಂದೆ, ಬ್ರಹ್ಮಕ್ಕೆ ಹೆಂಡಿರುಮಕ್ಕಳು, ಬ್ರಹ್ಮಕ್ಕೆ ಜಾತಿ, ವರ್ಣ, ಕುಲ, ಆಶ್ರಮಗಳು ಎಲ್ಲಿ ಇರುತ್ತವೆ?

ಪ್ರಮಾಣ ೧

ಬ್ರಹ್ಮ ವಿದ್ಯೋಪನಿಷತ್ ಶ್ಲೋಕ ೨೯–೩೦

ಆತ್ಮಾನಮಾತ್ಮನಾ ಸಾಕ್ಷಾದ್ ಬ್ರಹ್ಮ ಬುದ್ಧ್ವಾ ಸುನಿಶ್ಚಲಂ
ದೇಹ ಜಾತ್ಯಾದಿ ಸಂಬಂಧಾನ್ ವರ್ಣಾಶ್ರಮ ಸಮನ್ವಿತಾನ್
ವೇದ ಶಾಸ್ತ್ರಾಣಿ ಚಾನ್ಯಾನಿ ಪದ ಪಾಂಸುಮಿವ ತ್ಯಜೇತ್

ಭಾವಾರ್ಥ

ಪ್ರತ್ಯಕ್ಷನಾದ ಬ್ರಹ್ಮವನ್ನು ತನ್ನ ಸ್ವರೂಪವಲ್ಲಿ ತಾನು ಅನುಮಾನವಿಲ್ಲದೆ ತಿಳಿದುಕೊಂಡು ದೇಹ, ಜಾತಿ, ಸಂಬಂಧವನ್ನೂ ವರ್ಣಾಶ್ರಮಗಳನ್ನೂ ಹೇಳುವ ವೇದಶಾಸ್ತ್ರ ಮೊದಲಾದವುಗಳನ್ನು ಕಾಲಿನಧೂಳಿನಂತೆ ಭಾವಿಸಿ ಬಿಟ್ಟುಬಿಡಬೇಕು.

ಪ್ರಮಾಣ ೨

ಲಿಂಗೋಪನಿಷತ್

............

ಜಾತಿವಿಷಯಾನ್ ತ್ಯಜೇತ್

..........

ಧಾರಣಂ ದೇಹಂ ಬ್ರಹ್ಮಸ್ವರೂಪಂ
ಧಾರಣಂ ದೇಹಂ ಶಿವಸ್ವರೂಪಃ

ಭಾವಾರ್ಥ

ಲಿಂಗಧಾರಣ ಮಾಡಿದವನು ಜಾತಿವಿಷಯಗಳನ್ನು ಬಿಡಬೇಕು. ಲಿಂಗಧಾರಣ ದೇಹವು ಬ್ರಹ್ಮಸ್ವರೂಪವು, ಲಿಂಗಧಾರಣ ದೇಹವು ಶಿವಸ್ವರೂಪವು.

ವಿಚಾರ

ಒಣ ವೇದಾಂತಿಯು ತಾನು ಬ್ರಹ್ಮನೆಂದು ಹೇಳಿ ತಾನಿರುವ ಜಾತಿ, ವರ್ಣ, ಕುಲ, ಆಶ್ರಮಗಳ ಪದ್ಧತಿಯ ಪ್ರಕಾರ ನಡೆಯುತ್ತಾನೆ. ಅಥವಾ ತನಗೆ ಬೇಕಾದ ರೀತಿಯಲ್ಲಿ ನಡೆದರೂ ಅದು ತನಗೆ ಸಂಬಂಧವಿಲ್ಲವೆಂದು ಹೇಳುತ್ತಾನೆ. ಬೇಕಾದರೀತಿಯಲ್ಲಿ ನಡೆವುದು ಬ್ರಹ್ಮದ ಲಕ್ಷಣವೇನು? ಬ್ರಹ್ಮನಾದವನು ಇವನ್ನೆಲ್ಲಾ ಮೀರಿ ಅತ್ಯಾಶ್ರಮಿ ಅತಿವರ್ಣಿಯಾಗಿ ಅದಕ್ಕೆ ತಕ್ಕ ಲಕ್ಷಣವನ್ನು ಶಾಸ್ತ್ರಗಳು ವಿಧಿಸುವಂತೆ ನಡೆಯಬೇಕು. ಪಶುಗಳಂತೆ ಇಂದ್ರಿಯ ಸುಖಕ್ಕಾಗಿ ಮಾತ್ರ ಯೋಚಿಸಿ ನಡೆಯ

ಬಾರದು. ಅದ್ವೈತಿಯು ಈ ತಿಳಿವಳಿಕೆಯಂತೆ ಆಚರಿಸುವದಿಲ್ಲ. ಅದ
ರಿಂದ ಇವನ ಬ್ರಹ್ಮವು ಜಾತಿ ಗೋತ್ರಗಳುಳ್ಳದ್ದಾಗಿ ಕೆಲಸಮಾಡಿದಂತೆ
ಆಗುತ್ತದೆ.

---

೫೪. ಜಾತಿಸೂತಕ ಜನನ । ಪ್ರೇತಸೂತಕ ರಜಸು
ಭೀತಿ ಎಂಜಲಿನ—ಸೂತಕದಲಿ ಬಿದ್ದ
ಪಾತಕ ನೀನೆಂತು, ಬ್ರಹ್ಮನೈ

ತಾತ್ಪರ್ಯ

ಅಂತ್ಯಜನನ್ನು ಮುಟ್ಟಬಾರದೆಂಬ ಜಾತಿಸೂತಕ, ಹಡೆದಾಗಿನ
ಸೂತಕ, ಬಂಧುಗಳು ಸತ್ತಾಗ ದೇವನ ಪೂಜೆಮಾಡುವದಕ್ಕೆ ಹಕ್ಕಿಲ್ಲವೆಂಬ
ಮರಣ ಸೂತಕ, ಹೆಂಗಸು ಪುಷ್ಪಿಣಿಯಾದರೆ ಒಳಗೆ ಮುಟ್ಟಿದರೆ ಕೆಡುವ
ದೆಂಬ ರಜಃ ಸೂತಕ, ಎಂಜಲು ಮುಟ್ಟಿದರೆ ನಾನು ಅಶುದ್ಧನಾದೆನು
ಎಂಬ ಸೂತಕ ಈ ಐದು ಸೂತಕಗಳಲ್ಲಿ ಬಿದ್ದಿರುವ ಪಾಪಿಯೇ ನೀನು
ಹೇಗೆ ಬ್ರಹ್ಮ?

ಸಾಕ್ಷಿ

ಜಾತಿ ಜನ್ಮ ಮೃತೋಚ್ಛಿಷ್ಟ । ರಜಾಂಸೀತಿ ಯಥಾ ತಥಾ
ಪಂಚ ಸೂತಕ ಸಂಯುಕ್ತ ಮಿತ್ಯೇತಜ್ಜೀವ ವರ್ತನಂ

ಭಾವಾರ್ಥ

ಜಾತಿಸೂತಕ, ಜನ್ಮಸೂತಕ, ಮೃತಸೂತಕ, ಉಚ್ಛಿಷ್ಟಸೂತಕ.
ರಜಸ್ಸೂತಕ, ಈ ಪಂಚಸೂತಕದಿಂದ ಕೂಡಿರುವುದು ಜೀವ ವರ್ತನವು.
ಎಂದರೆ ನಾನು ಜೀವ, ಅಥವಾ ನಾನು ಮನುಷ್ಯ ಎಂಬಭಾವನೆಯುಳ್ಳವನ
ವರ್ತನೆಯು.

---

ಪ್ರಮಾಣ

ತೇಜೋಬಿಂದೂಪನಿಷತ್: ೬ನೆಯ ಅಧ್ಯಾಯ ಶ್ಲೋಕ ೨೯

ನ ಸೂತಕಂ ನ ಜಾತಂ ವಾ ನಾಂತರ್ಮುಖ ಸು ವಿಭ್ರಮಃ
ಸರ್ವ ಚೈತನ್ಯ ಮಾತ್ರತ್ವಾತ್ ಸರ್ವದೋಷಃ ಸದಾ ನ ಹಿ

### ಭಾವಾರ್ಥ

ಸೂತಕವಿಲ್ಲ, ಜನನವಿಲ್ಲ, ಅಂತರ್ಮುಖವಾದ—ಎಂದರೆ ಒಳಗೆ ಮಾತ್ರ ಸರ್ವವೂ ಬ್ರಹ್ಮವೆಂದು ತಿಳಿಯಬೇಕು, ಹೊರಗೆ ಲೋಕದಂತೆ ನಡೆಯಬೇಕು, ಎಂಬ—ಭ್ರಮೆ ಇಲ್ಲ. ಸರ್ವವೂ ಚೈತನ್ಯ ( ಬ್ರಹ್ಮ) ಮಾತ್ರವೇ ಆಗಿರುವವರ ದೆಸೆಯಿಂದ ಯಾವಾಗಲೂ ಎಲ್ಲಾ ದೋಷಗಳೂ ಇಲ್ಲ.

### ಪ್ರಮಾಣ ೨

### ಬ್ರಹ್ಮೋಪನಿಷತ್

ಯದಕ್ಷರಂ ಪರಂಬ್ರಹ್ಮ ತತ್ ಸೂತ್ರಮಿತಿ ಧಾರಯೇತ್

......................

ಬ್ರಹ್ಮ ಭಾವ ಮಿದಂ ಸೂತ್ರಂ ಧಾರಯೇದ್ ಯಃ ಸಚೇತನಃ॥
ಧಾರಣಾತ್ತಸ್ಯ ಸೂತ್ರಸ್ಯ ನೋಚ್ಛಿಷ್ಟೋ ನಾಶುಚಿರ್ಭವೇತ್

### ಭಾವಾರ್ಥ

ಯಾವುದು ಅಕ್ಷರ ( ನಾಶವಿಲ್ಲದ ) ಪರಬ್ರಹ್ಮವೋ ಅದನ್ನು ಸೂತ್ರವೆಂದು ಧರಿಸಬೇಕು. ಈ ಬ್ರಹ್ಮಭಾವದ ಸೂತ್ರವನ್ನು ಯಾವನು ಧರಿಸುವನೋ ಅವನು ಚೈತನ್ಯ ಸ್ವರೂಪನು. ಈ ಸೂತ್ರದ ಧಾರಣದಿಂದ ಉಚ್ಛಿಷ್ಟ ( ಎಂಜಲುದೋಷ ) ವಾಗಲೀ ಅಶುಚಿ ( ಮೈಲಿಗೆಯ ದೋಷವು ) ಆಗಲೀ ಇರುವದಿಲ್ಲ. ( ಇಲ್ಲಿ ಸೂತ್ರ ಎಂಬುದು ಲಿಂಗಕ್ಕೆ ಸರಿಗೂಡುತ್ತದೆ ಎಂದು ಹಿರಿಯರು ತಮ್ಮ ಗ್ರಂಥಗಳಲ್ಲಿ ಹೇಳಿರುತ್ತಾರೆ.)

### ವಿಚಾರ

ಹರಟೆಕಾರನು ತಾನು ಬ್ರಹ್ಮನೆಂದು ಹೇಳಿಕೊಂಡರೂ ತನ್ನ ಪದ್ಧತಿಯ ಪ್ರಕಾರ ಸೂತಕಗಳನ್ನು ಅನುಸರಿಸಿಕೊಂಡಿರುತ್ತಾನೆ. ಹೀಗೆ ಆಚರಿಸುವದು ಜೀವನಿಗೆ ಸೇರಿದ್ದೋ ಹೊರತು ಬ್ರಹ್ಮನ ಕಾರ್ಯವಲ್ಲ, ಆದ್ದರಿಂದ ಇವನು ಬ್ರಹ್ಮನಲ್ಲ.

---

೩೫. ಎನ್ನ ಸತಿ ಎನ್ನ ಸುತ । ಎನ್ನ ಪಿತ ಮಾತೆಯರು
ಎನ್ನ ಧನವೆನ್ನ—ಗೃಹಕ್ಷೇತ್ರ ವೆಂದೆಂಬ
ಕುನ್ನಿ ನೀನೆಂತು ಬ್ರಹ್ಮವೈ

ತಾತ್ಪರ್ಯ

ನನ್ನ ಹೆಂಡತಿ, ನನ್ನ ಮಗ, ನನ್ನ ತಂದೆತಾಯಿ, ನನ್ನ ಹಣ, ನನ್ನ ಮನೆ, ನನ್ನ ಕ್ಷೇತ್ರ ಎಂದು ಹೇಳುವ ನಾಯಿಯೇ ನೀನು ಹೇಗೆ ಬ್ರಹ್ಮ?

ವಿಚಾರ

ಸರ್ವವೂ ಬ್ರಹ್ಮ ಎಂಬುದನ್ನು ಒಳಗಡೆಯಲ್ಲಿ ( ಅಂತರಂಗದಲ್ಲಿ ) ಮಾತ್ರ ತಿಳಿದಿರು, ಹೊರಗೆ ಜನರಂತೆ ನಡೆ ಎಂಬದಾಗಿ ಹೇಳುವ ಅದ್ವೈತಿಯು ಮಾತಿನಲ್ಲಿ ಬ್ರಹ್ಮನಾಗಿ ನಡತೆಯಲ್ಲಿ ಪಶುವಿನಂತೆ ಆಗಿರುತ್ತಾನೆ. ಎಂದರೆ ನನ್ನ ಹೆಂಡತಿ ನನ್ನ ಮಗ ನನ್ನ ಹಣವೆಂದು 'ನಡೆದಾಗ್ಯೂ ಪ್ರಪಂಚವು ಮಿಥ್ಯೆ ( ಸುಳ್ಳು") ಎಂಬ ಭಾವನೆಯನ್ನು ತೋರಿಸುತ್ತಾನೆ. ಹೀಗೆ ನಡೆಯುವುದು ದೋಷವು, ಇದೇ ಮಮಕಾರವು.

( ಮುಂದಿನ ಪದ್ಯಗಳಲ್ಲಿ ಪ್ರಮಾಣಗಳಿವೆ )

---

೫೬. ಬ್ರಹ್ಮ ತಾನಾದವಗೆ । ಹಮ್ಮಿಲ್ಲ ಬಿಮ್ಮಿಲ್ಲ
ಎಮ್ಮವರು ಅನ್ಯ—ರೆಂದಿಲ್ಲ ಈ ಜಗದ
ಕರ್ಮಿ ನೀನೆಂತು ಬ್ರಹ್ಮವೈ

ತಾತ್ಪರ್ಯ

ತಾನು ಬ್ರಹ್ಮನಾದವನಿಗೆ ಹಮ್ಮು (ಅಹಂಕಾರ) ಬಿಮ್ಮು (ದೊಡ್ಡಸ್ತಿಕೆ=ಗರ್ವ)ಗಳು ಇಲ್ಲ. ನಮ್ಮವರು ಬೇರೆಯವರು ಎಂಬುದಾಗಿ ಇಲ್ಲ. ಈ ಜಗತ್ತಿನ ಪ್ರಾಣಿಗಳ ಕರ್ಮದಂತೆ ಕಾರ್ಯ ಮಾಡುತ್ತಿರುವವನೇ, ಜೀವಿಯೇ, ನೀನು ಹೇಗೆ ಬ್ರಹ್ಮ?

ಪ್ರಮಾಣ

ನಾರದ ಪರಿವ್ರಾಜಕ ಉಪನಿಷತ್

ಕರ್ತೃತ್ವ ಭೋಕ್ತೃತ್ವಾಹಂಕಾರಾದಿಭಿಃ ಸ್ಪೃಷ್ಟೋ ಜೀವಃ। ಜೀವೇತರೋ ನ ಸ್ಪೃಷ್ಟಃ।
ಜೀವೋಪಿ ಸ ಸ್ಪೃಷ್ಟ ಇತಿ ಚೇನ್ ನ। ಜೀವಾಭಿಮಾನೇನ ಕ್ಷೇತ್ರಾಭಿಮಾನಃ। ಶರೀರಾಭಿಮಾನೇನ ಜೀವತ್ವಂ।

## ಭಾವಾರ್ಥ

ನಾನು ಮಾಡುವೆನು ನನ್ನ ಮನೆಯುಂಟು ಎಂಬಲ್ಲಿ 'ನಾನು' 'ನನ್ನದು' ಮೊದಲಾದ ಪದಗಳಿಂದ ತಿಳಿಯಲ್ಪಡುವವನು ಜೀವನು. ಜೀವನಲ್ಲದವನು ಆ ಪದಗಳ ಸಂಬಂಧವಿಲ್ಲದವನು. ಜೀವನಿಗೂ ಆ ಪದಗಳ ಸಂಬಂಧವಿಲ್ಲವೆಂದರೆ ಅದು ಸರಿಯಲ್ಲ. ಜೀವನು ನಾನು ಎಂಬ ಅಭಿಮಾನದಿಂದಲೇ ಕ್ಷೇತ್ರ ಎಂದರೆ ದೇಹದ ಅಭಿಮಾನವು ಎಂದರೆ ದೇಹವೇ ನಾನು ಎಂಬುದು ಉಂಟಾಗುತ್ತದೆ. ಆ ಶರೀರದ ಅಭಿಮಾನದಿಂದಲೇ ಜೀವನು ನಾನು ಎಂಬ ಅಭಿಮಾನವು ಬರುತ್ತದೆ ಹೀಗೆ ಒಂದನ್ನೊಂದು ಸಂಬಂಧಿಸಿಕೊಂಡು ಇವೆ.

## ವಿಚಾರ

ಲೋಕದವರಂತೆ ಕರ್ಮ ಮಾಡುವ ಅದ್ವೈತಿಯು 'ನಾನು ಬ್ರಹ್ಮ' ಎಂದಾಗಲೇ ಅವನು 'ಬ್ರಹ್ಮನಲ್ಲ. ನಾನು ಎಂಬುದು ಅಹಂಕಾರವು. ಇವನ ಹೇಳುವಿಕೆಯೇ ಅಹಂಬ್ರಹ್ಮಾಸ್ಮಿ, ಶಿವೋಹಂ ಎಂಬುದಾಗಿ ಅಹಂ ಕೂಡಿಕೊಂಡೇ ಇರುತ್ತವೆ. ಆದ್ದರಿಂದ ಇವನು ಕರ್ಮಿಯೇ ಸರಿ. ಕೇವಲ ಶಿವನೇ ನಾನೆಂದು ತಿಳಿದಮೇಲೆ ಶಿವನೇ ಎಲ್ಲವನ್ನೂ ಮಾಡುತ್ತಾನೆ, ಶಿವನೇ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಇದ್ದಾನೆ, ಎಂಬ ಭಾವನೆಯುಳ್ಳವನಾಗಿ ( ಶಿವಸ್ವರೂಪನಾಗಿ ) ನಡೆಯಬೇಕು. ಆಗ ಅಹಂ ಶಬ್ದದ ಉಪಯೋಗವಾಗುವದಿಲ್ಲ.

---

೫೭.
ಬ್ರಹ್ಮ ತಾನಾದವನು । ನೆಮ್ಮುವನೆ ತ್ರೈಮಲವ
ಎಮ್ಮ ಪಿತಮಾತೆ,—ಸತಿ ಸುತರು ಸಖರೆಂಬ
ಕರ್ಮ ಸೀಸೆಂತು ಬ್ರಹ್ಮವೈ

## ತಾತ್ಪರ್ಯ

ಬ್ರಹ್ಮನಾದವನು ಹೊನ್ನು, ಹೆಣ್ಣು ಮಣ್ಣುಗಳೆಂಬ ಮೂರು ಮಲಗಳನ್ನು ನಂಬುತ್ತಾನೇನು? ಅಥವಾ ಆಣವಮಲ (ನಮ್ಮ ತಂದೆತಾಯಿಗಳಿಂದ ನಾನು ಹುಟ್ಟಿದೆನು ಎಂಬ ಮಲ ) ಮಾಯಾಮಲ ( ಜಗತ್ತಿನಲ್ಲಿ ಇರುವ ವಸ್ತುಗಳು ನನ್ನ ಉಪಯೋಗಕ್ಕೆ ಇವೆ ಎಂಬ ಮಲ )

ಶಾರೀರಿಕ ಮಲ (ನನ್ನ ಪೂರ್ವ ಜನ್ಮದ ಕರ್ಮಕ್ಕೆ ಅನುಸಾರವಾಗಿ ನಡೆಯುತ್ತೇನೆ ಎಂಬ ಮಲ) ಈ ಮೂರು ಮಲಗಳನ್ನು ನೆಚ್ಚಿಕೊಂಡು ಇರುತ್ತಾನೆ. ನನ್ನ ತಂದೆತಾಯಿಗಳು, ನನ್ನ ಹೆಂಡಿರು ಮಕ್ಕಳು, ನನ್ನ ಸ್ನೇಹಿತರು, ಎಂದು ಹೇಳುವ ಕರ್ಮಿಯೇ ನೀನು ಹೇಗೆ ಬ್ರಹ್ಮ?

ಪ್ರಮಾಣ ೧

ಯೋಗ ಶಿಖಾ—ಶ್ಲೋಕ ೩೬

ಕಾರಣೇನ ವಿನಾಕಾರ್ಯಂ ನ ಕದಾಚನ ವಿದ್ಯತೇ
ಅಹಂಕಾರಂ ವಿನಾ ತದ್ವದ್ ದೇಹೇ ದುಃಖಂ ಕಥಂ ಭವೇತ್ ।

ಭಾವಾರ್ಥ

ಕಾರಣವಿಲ್ಲದೆ ಕಾರ್ಯವು ಎಂದೂ ಇರುವದಿಲ್ಲ. (ಮೂಲ ವಸ್ತುವಿಲ್ಲದೆ ಅದರಂತ ಆಗುವ ಇತರ ವಸ್ತುಗಳು ಇರುವದಿಲ್ಲ.) ಅದರಂತೆ ದೇಹದಲ್ಲಿ ಅಹಂಕಾರವಿಲ್ಲದೆ ಇದ್ದರೆ ದುಃಖವು ಇರುವದಿಲ್ಲ. ಎಂದರೆ ದುಃಖಕ್ಕೆ ಅಹಂಕಾರವೇ ಮೂಲವಾಗಿರುತ್ತದೆ.

ಪ್ರಮಾಣ ೨

ಮೈತ್ರೇಯಿ ಉಪನಿಷತ್ ಶ್ಲೋಕ ೮—೯

ಅಹಂ ಮಮೇತಿ ವಿಣ್ಮೂತ್ರ ಲೇಪ ಗಂಧಾದಿ ಮೋಚನಂ ।
ಶುದ್ಧ ಶೌಚಮಿತಿ ಪ್ರೋಕ್ತಂ ಮೃಜ್ಜಲಾಭ್ಯಾಂತು ಲೌಕಿಕಂ ॥

ಭಾವಾರ್ಥ

ನಾನು ನನ್ನದು ಎಂಬುದು ಮಲಮೂತ್ರದಂತೆ ಇರುವುದು. ಇವನ್ನು ಬಳಿದುಕೊಂಡು ಇರುವವನು ಆ ದುರ್ಗಂಧವನ್ನು ತ್ಯಜಿಸುವುದೇ ಶುದ್ಧ ಶೌಚವು. ಮಣ್ಣು ಮತ್ತು ನೀರಿನಿಂದ ದೇಹವನ್ನು ತೊಳೆವುದು ಲೌಕಿಕ ಶೌಚವು ಎಂದರೆ ಸಾಮಾನ್ಯವಾಗಿ ಜನರು ನಡೆಸುವ ಶೌಚವಾಗಿ ಇದೆ (ಈ ಎರಡರಲ್ಲಿ ಮನಸ್ಸನ್ನೂ ವೃತ್ತಿಯನ್ನೂ ಶುಚಿಮಾಡುವ ಶುದ್ಧ ಶೌಚವೇ ಮೊದಲನೆಯದು.)

ವಿಚಾರ

ಅಹಂಕಾರ ಮಮಕಾರಗಳೆಂಬಿವು ಕರ್ಮದ ಬೀಜಗಳು. ನನ್ನ

ಹೆಂಡಿರು ಮಕ್ಕಳೆಂದು ಹೇಳುವ ಮತ್ತು ಅದರಂತೆ ನಡೆವ ಅದ್ವೈತಿಯು ಅವರಿಗಾಗಿ ಕೆಲಸ ಮಾಡಲೇಬೇಕು. ಆದ್ದರಿಂದ ಅವನು ಕರ್ಮಿಯಾಗುತ್ತಾನೆ.

---

೫೮. ಇಷ್ಟು ಸಂಸಾರದೊಳು । ಹೊದ್ದಿಲ್ಲ ತಾನೆಂದು
ಅದ್ವೈತ ವಾಡಿ—ಗಳಹುವನ ನರಕದೊಳ
ಗದ್ದದ್ದಿ ತೆಗೆವರಿದು ಸತ್ಯ

ತಾತ್ಪರ್ಯ

ಸಂಸಾರದಲ್ಲಿ ಕೂಡಿಕೊಂಡಿಪ್ಪಾಗ್ಯೂ ನಾನು ಸಂಸಾರದಲ್ಲಿ ಸೇರಿಲ್ಲವೆಂಬ ಅದ್ವೈತದ ಮಾತನ್ನಾಡಿ ಹರಟುವವನನ್ನು ನರಕದಲ್ಲಿ ಮುಳುಗಿಸಿ ಮುಳುಗಿಸಿ ತೆಗೆಯುತ್ತಾರೆ ನಿಜ.

ವಿಚಾರ

ಮನೆ ಮೊದಲಾದವು ಇದ್ದರೇನೇ ಸಂಸಾರವೆಂದಲ್ಲ. ಹೆಂಡಿರು ಮಕ್ಕಳಿಲ್ಲದಿದ್ದರೆ ಅಥವಾ ಅವರಲ್ಲಿ ಮೋಹವಿಡದೆ ಇದ್ದರೆ ಸಂಸಾರವಿಲ್ಲವೆಂದು ತಿಳಿಯಬಾರದು. ಸಂಸಾರವೆಂಬುದು ಇಷ್ಟರಲ್ಲಿಯೇ ಮುಗಿಯುವದಿಲ್ಲ. ದೇಹವೂ ಒಂದು ಸಂಸಾರ. ಬರಿಯಮಾತಿನ ವೇದಾಂತಿಯು ಈ ದೇಹಕ್ಕೆ ಏನು ಸಂಸ್ಕಾರವನ್ನು ಮಾಡಿರುತ್ತಾನೆ? ತಾನು ಬ್ರಹ್ಮ ಎಂದು ಬಾಯಲ್ಲಿ ಹೇಳುವದೊಂದೇ ಬಲ್ಲನು. ಇದರಿಂದ ದೇಹವಾಸನೆ ಬಿಡದೆ ಮರಳಿ ಮರಳಿ ಹುಟ್ಟಿ ಎಂದರೆ ತಾಯಿಯಗರ್ಭವೆಂಬ ನರಕದಲ್ಲಿ ಮುಳುಮುಳುಗಿ, ಏಳುತ್ತಾನೆ.

ಪ್ರಮಾಣ ೧

ಅಧ್ಯಾತ್ಮೋಪನಿಷತ್ ಶ್ಲೋಕ ೧

ಅಹಂ ಮಮೇತಿ ಯೋ ಭಾವೋ ದೇಹಾಕ್ಷಾದಾವನಾತ್ಮನಿ
ಅಧ್ಯಾಸೋಽಯಂ ನಿರಸ್ತವ್ಯೋ ವಿದುಷಾ ಬ್ರಹ್ಮನಿಷ್ಠಯಾ

ಭಾವಾರ್ಥ

ದೇಹವೇ ನಾನು ಎಂಬ ಭಾವನೆ, ಇಂದ್ರಿಯಗಳು ನನ್ನವು ಎಂಬ ಭಾವನೆ, ಈ ಭಾವನೆಗಳು ಬ್ರಹ್ಮನಲ್ಲಿ ನಿಷ್ಠೆಯುಳ್ಳ ಪಂಡಿತನಿಂದ ಬಿಡಲು ತಕ್ಕವುಗಳಾಗಿವೆ.

ಪ್ರಮಾಣ ೨
ಯೋಗಶಿಖಾ ಶ್ಲೋಕ ೪೯

ದೇಹಾಂತೇ ಜ್ಞಾನಿಭಿಃ ಪುಣ್ಯಾತ್ಪಾಪಾಚ್ಚ ಫಲಮಾಪ್ಯತೇ ।
ಈದೃಶಂತು ಭವೇತ್ ತತ್ತದ್ ಭುಕ್ತ್ವಾ ಜ್ಞಾನೀಪುನರ್ಭವೇತ್

ಭಾವಾರ್ಥ

ಜ್ಞಾನಿಯಾದವನು (ತಾನೇ ಶಿವನೆಂದು ಹೇಳುವ ಬರಿಯಮಾತಿನ ಅದ್ವೈತಿಯು) ದೇಹದ ಕೊನೆಯಲ್ಲಿ ಪಾಪ ಪುಣ್ಯದ ಫಲವನ್ನು ಪಡೆಯುತ್ತಾನೆ. ಆಯಾ ಫಲಗಳನ್ನು ಅನುಭವಿಸಿ ಮತ್ತೆ ಹುಟ್ಟುತ್ತಾನೆ. (ಆದುದರಿಂದ ಯೋಗವಿಲ್ಲದ ಜ್ಞಾನವು ಉತ್ತಮವಲ್ಲ.)

---

೪೯. ದುರ್ಬುದ್ಧಿ ದುರ್ನೀತಿ । ದುರ್ಮಾರ್ಗದಲಿ ಚರಿಪ
ಕರ್ಮಿ ವಾಗ್‌ಬ್ರಹ್ಮ—ಶಾಸ್ತ್ರವನು ಕಲಿಯೆ ವಾಗ್
ಬ್ರಹ್ಮಿ ಎಂದೆನಿಸುವುದು ಸಹಜ.

ತಾತ್ಪರ್ಯ

ಕೆಟ್ಟಬುದ್ಧಿ, ಕೆಟ್ಟನೀತಿ, ಕೆಟ್ಟಮಾರ್ಗದಲ್ಲಿ ನಡೆಯುವ ಕರ್ಮಿಯು, ಮಾತಿನಲ್ಲಿನ (ಸುಮ್ಮನೆ ನುಡಿಯುವ) ಬ್ರಹ್ಮ ವಿದ್ಯೆಯನು ಕಲಿಯಲು ಮಾತಿನ ಬ್ರಹ್ಮನು (ವಾಗ್ ಬ್ರಹ್ಮಿ) ಎಂದು ಹೆಸರು ಪಡೆವುದು ಸಹಜ.

ಸಾಕ್ಷಿ

ದುರ್ವೃತ್ತೋಪಿ ಚ ದುರ್ನೀತೋ ಜೀವ ಭಾವ ಸಮನ್ವಿತಃ
ಶಾಸ್ತ್ರವಾಚಾಳಕತ್ವೇನ ವಾಗದ್ವೈತೀತಿ ಕೀರ್ತ್ಯತೇ

ಕೆಟ್ಟ ನಡತೆಯುಳ್ಳವನೂ, ಕೆಟ್ಟ ನೀತಿಯುಳ್ಳವನೂ, ಜೀವಗುಣಗಳಿಂದ ಕೂಡಿದವನೂ, ಆದವನು ಬ್ರಹ್ಮವಿದ್ಯೆಯ ಶಾಸ್ತ್ರವನ್ನೋದಿ, ವಾದಿಸಿ ಅದ್ವೈತವೇ ದೊಡ್ಡದೆಂದು ಸಿದ್ಧಿ ಮಾಡಿದರೂ 'ವಾಗದ್ವೈತಿ' ಎಂದು ಕರೆಯಲ್ಪಡುತ್ತಾನೆ.

(ಈ ಗ್ರಂಥದಲ್ಲಿ ಹೇಳುವ ವಾಗದ್ವೈತಿ ಎನ್ನಿಸಿಕೊಳ್ಳುವವರು ಇದೇ ಲಕ್ಷಣವುಳ್ಳವರೆಂದು ಭಾವಿಸಬೇಕು.)

ವಿಚಾರ

ನಡತೆ ಹೇಗಿದ್ದರೂ ಇರಲಿ, ಜ್ಞಾನದಲ್ಲಿ ನಾನು ಬ್ರಹ್ಮ ಎಂದು ತಿಳಿದರೆ ಸಾಕೆಂದು ಯೋಚಿಸಬಾರದು. ನಾಟಕದೊಳಗೆ ಇದ್ದ ಹೆಸರಿನ ರಾಜನು ನಾಟಕ ಮುಗಿದಮೇಲೆ ಹೇಗೆ ಸಂಬಳದವನಾಗಿರುವನೋ ಅಥವಾ ಸಾಮಾನ್ಯ ಮನುಷ್ಯನಾಗಿರುವನೋ ಹಾಗೆ ನಾನು ಬ್ರಹ್ಮನೆಂದ. ಹೇಳುವ ವೇಷದ ಅದ್ವೈತಿಯು ನಿಜದಲ್ಲಿ ಕರ್ಮಿಯೇ ಆಗಿರುತ್ತಾನೆ.

ಪ್ರಮಾಣ

ಮೈತ್ರೇಯಿ ಉಪನಿಷತ್ತು, ಅಧ್ಯಾಯ ೨, ಶ್ಲೋಕ ೨೧

ಉತ್ತಮಾ ತತ್ವ ಚಿಂತೈವ ಮಧ್ಯಮಂ ಶಾಸ್ತ್ರಚಿಂತನಂ ॥
ಅಧಮಾ ಮಂತ್ರ ಚಿಂತಾಚ ತೀರ್ಥಭ್ರಾಂತ್ಯಧಮಾಧಮಾ ॥

ಭಾವಾರ್ಥ

ತತ್ತ್ವ, (ತಾನು ಬ್ರಹ್ಮನಾಗಿರುವಿಕೆ) ಈ ವಿಷಯದ ಚಿಂತೆಯು ಉತ್ತಮವು. ಬಹಳ ಶಾಸ್ತ್ರಗಳನ್ನು ಓದಿ ಜ್ಞಾನವನ್ನು ಪಡೆಯಬೇಕೆಂಬ ಚಿಂತೆಯು ಮಧ್ಯಮವು. ಮಂತ್ರ ಸಿದ್ಧಿಯನ್ನು ಪಡೆದು ಮೋಕ್ಷವನ್ನು ಪಡೆಯಬೇಕೆಂಬ ಚಿಂತೆಯು ಅಧಮವು. ತೀರ್ಥಯಾತ್ರೆಯನ್ನು ಮಾಡಿ ಮಹಾದೇವನನ್ನು ಕೂಡುವೆನೆಂಬ ಚಿಂತೆಯು ಅಧಮಾಧಮವು.

ವಿಚಾರ

ಮಹಾದೇವನನ್ನು ಕೂಡುವುದಕ್ಕೆ ಶಾಸ್ತ್ರದ ವಾಚಾಳಕತೆಯು ಪ್ರಯೋಜನವಲ್ಲ. ನಿಜವಾದ ಸಾಧನೆ ಬೇಕಾಗಿದೆ.

---

೬೦. ಕೆಚ್ಚನೆಯ ಚರ್ಮವನು । ಮಚ್ಚಿನೀ ಮಮುಕರಿಸಿ
ನಿಶ್ಚಯವ ಮರೆದು—ಉಚ್ಚೆ ‘ ಬಚ್ಚಲ್ ’(ಪಚ್ಚಲ್) ಗಾಹಿ
‘ನಿಶ್ಚಯ’ (ನಿಚ್ಚಯ)ವೆ ನಿನ್ನ ಬ್ರಹ್ಮತ್ವ

ತಾತ್ಪರ್ಯ

ಕೆಂಪಾದ ಚರ್ಮದ ದೇಹಕ್ಕೆ (ಸ್ತ್ರೀಗೆ)ನೀನು ಮನಸೋತು ನನ್ನದು ಎಂಬದಾಗಿ (ಹೆಂಡತಿಯನ್ನಾಗಿ) ಮಾಡಿಕೊಂಡು ನಿಜವಾದ ಪ

ವಸ್ತುವನ್ನು ಮರೆದು, ಯೋನಿಯನ್ನು ಕಾದುಕೊಂಡು ಇರುವವನೇ, ನಿನ್ನ ಬ್ರಹ್ಮತ್ವವು ನಿಜವೇನು?

ಪ್ರಮಾಣ

ಮಹೋಪನಿಷತ್ ೩ನೆಯ ಅಧ್ಯಾಯ ಶ್ಲೋಕ ೪೩

ಕೇಶಕಜ್ಜಲ ಧಾರಿಣ್ಯೋ ದುಃಸ್ಪರ್ಶಾ ಲೋಚನ ಪ್ರಿಯಾಃ।
ದುಷ್ಕೃತಾಗ್ನಿ ಶಿಖಾ ನಾರ್ಯೋ ದಹಂತಿ ತೃಣವನ್ನರಂ

ಭಾವಾರ್ಥ

ಕೂದಲುಗಳನ್ನೂ ಕಾಡಿಗೆಯನ್ನೂ ಧರಿಸಿ ಕಣ್ಣಿಗೆ ಪ್ರಿಯರಾಗಿ ಪಾಪವೆಂಬ ಬೆಂಕಿಯ ಜ್ವಾಲೆಯ ಹಾಗೆ ಇರುವ ಹೆಂಗಸರು (ಕೆಂಪಗೆ ಇರುವವರು) ಮುಟ್ಟಲಿಕ್ಕೆ ಅಸಾಧ್ಯರು, ಇವರು ಮನುಷ್ಯನನ್ನು (ಗಂಡನನ್ನು) ಹುಲ್ಲಿನಂತೆ ಸುಡುತ್ತಾರೆ. (ಈ ಮಾತಿಗೆ ಅಪವಾದವಾಗಿ ಎಂದರೆ ಇವರಂತೆ ವರ್ತನವಿಲ್ಲದ ಕೆಂಪಗಿನ (ಭಂಗಾರದ ಬಣ್ಣದ) ಸ್ತ್ರೀಯರೂ ಕೆಲವರು ಇರುತ್ತಾರೆ.)

ವಿಚಾರ

ಕೆಂಪು ಬಣ್ಣವುಳ್ಳ ಸ್ತ್ರೀಯ ದೇಹವನ್ನು ನೋಡಿ ಮನಸೋತು ಮದುವೆಯಾಗಿ ಆ ಹೆಂಡತಿಯನ್ನೇ ಯಾವಾಗಲೂ ಮೋಹದಿಂದ ನೋಡುತ್ತಾ ಎಲ್ಲಿ ವ್ಯಭಿಚಾರ ಮಾಡುವಳೋ ಎಂಬ ಸಂಶಯದಿಂದ ಆಕೆಯನ್ನು ಕಾದುಕೊಂಡಿರುವವನಾಗಿ ನಿಜವಸ್ತುವಾದ ಮಹಾದೇವನನ್ನು ಮರೆದಿರುವವನು 'ನಾನು ಬ್ರಹ್ಮನಾಗಿದ್ದೇನೆ' ಎಂದರೆ ಅದು ನಿಜವೇನು? ಹೀಗೆ ಮಾತಿನ ವೇದಾಂತಿಗೂ ಕೆಲಸಮಾಡಿ ತೋರಿಸುವ ವೇದಾಂತಕ್ಕೂ ಬಹಳ ಭಿನ್ನತೆ ಇದೆ.

---

೬೧. ನಿನ್ನಮುಖ ಬೆನ್ನನ್ನು । ನಿನ್ನ ನೀ ಕಾಣವಲೆ
ಅನ್ಯ ವಪ್ಪೊಂದು—ಕೈಪಿಡಿಯ ನೋಡಿ ಭಗ
ಗನ್ನ ಗೊರೆವವ ನೀ ಬ್ರಹ್ಮವೇ?

ತಾತ್ಪರ್ಯ

ನಿನ್ನ ಮುಖ ಬೆನ್ನು ನಿನಗೆ ಕಾಣುವದಿಲ್ಲ. ನಿನ್ನನ್ನೂ ನೀನು ನೋಡುವುದಿಲ್ಲ. ಬೇರೆ ಇರುವ ಕನ್ನಡಿಯನ್ನು ನೋಡಿ ಯೋನಿರಂಧ್ರವನ್ನು ಕೊರೆಯುವವನೇ, ನೀನು ಬ್ರಹ್ಮವೇನು?

ಪ್ರಮಾಣ

ಮಹೋಪನಿಷತ್ ಶ್ಲೋಕ ೪೫

ಕಾಮ ನಾಮ್ನಾ ಕಿರಾತೇನ ವಿಕೀರ್ಣಾ ಮುಗ್ಧ ಚೇತಸಃ ।
ನಾರ್ಯೋ ನರ ವಿಹಂಗಾನಾಂ ಅಂಗ ಬಂಧನ ವಾಗುರಾಃ ॥

ಮೋಹದ ಚಿತ್ತವುಳ್ಳ ಹೆಂಗಸರು ಮನುಷ್ಯ (ಗಂಡಸ) ರೆಂಬ ಪಕ್ಷಿಗಳಿಗಾಗಿ ಕಾಮನೆಂಬ ಬೇಡರವನು ಹರಡಿದ ದೇಹವನ್ನು ಬಂಧಿಸುವ ಬಲೆಗಳು ಆಗಿರುತ್ತಾರೆ.

ವಿಚಾರ

ಮುಂದಿನಸಂಗತಿ (ಮುಖ) ಹಿಂದಿನಸಂಗತಿ (ಬೆನ್ನು) ಇವನ್ನು ನೀನು ನೋಡದೆ (ಆ ಮೂಲಕ ನಿಜವಸ್ತುವನ್ನು ಸಾಧಿಸದೆ) ಕಳ್ಳರು ಹೊರಗೆ ಇರುವ ಗೋಡೆಯನ್ನು ನೋಡಿ ಕನ್ನವನ್ನು ಕೊರೆಯುವಹಾಗೆ ಕನ್ನಡಿಯಂತಿರುವ ಮುಖವನ್ನು ಮಾತ್ರ ನೋಡಿ ಯೋನಿಗಸ್ನವನ್ನು ಕೊರೆಯುವದು ನ್ಯಾಯವಾದ ಕೆಲಸವಲ್ಲ. ಕಾಮಾತುರಕ್ಕೆ ಒಳಗಾಗಿ ಹೆಂಡತಿಬೇಕೆಂಬುದು ಸರಿಯಲ್ಲ. ಶಿವಶರಣರ ಪದ್ಧತಿಗೆ ಅನುಸಾರವಾಗಿ ಗುರು ಲಿಂಗ ಜಂಗಮರ ಧಾಸೋಹಕ್ಕಾಗಿ ಹೆಂಡತಿಯುಬೇಕು ಎಂದು ಇರುವುದು ಉತ್ತಮವಾದ ಪದ್ಧತಿ.

---

೭೨. ಹಸಿವು ತೃಷೆನಿದ್ರೆ ದು | ರ್ವ್ಯಸನದೊಳು ಮೈಮರೆದು
ಹುಸಿಯ ಸಂಸಾರ—ವನು ಮೆಚ್ಚಿ ಬಿಡದ ನರ
ಪಶುವೆ ನೀನೆಂತು ಬ್ರಹ್ಮವೈ?

ತಾತ್ಪರ್ಯ

ಹಸಿವು, ನೀರಡಿಕೆ, ನಿದ್ರೆ ಕೆಟ್ಟವ್ಯಸನಗಳು (ಮದ್ಯಪಾನ ಮೊದಲಾದವು) ಇವುಗಳ ದೆಸೆಯಿಂದ ನಿನ್ನ ಸ್ಥಿತಿಯನ್ನು ಮರೆದು, ಲೌಕಿಕರು ಮಾಡುವಂತಹ ಸುಳ್ಳಿನ ಸಂಸಾರವನ್ನು ದೇಹದ ದೆಸೆಯಿಂದ ನಂಬಿಕೊಂಡು ಅವುಗಳನ್ನು ಬಿಡದೆ ಇರುವ ಪಶುವಿನಂತಿರುವ ಮನುಷ್ಯನೇ ನೀನು ಹೇಗೆ ಬ್ರಹ್ಮ?

ಪ್ರಮಾಣವು ಮುಂದಿನ ಪದ್ಯದಲ್ಲಿ ಇದೆ.

ವಿಚಾರ

ಸುಖವನ್ನು ಅಪೇಕ್ಷಿಸುವುದು ಜೀವನಗುಣ. ಹೀಗೆ ಜೀವನಿಗೆ ಸಂತೋಷಪಡಿಸುವದಕ್ಕೆ ಬೇಕಾದದ್ದನ್ನೆಲ್ಲಾ ಮಾಡಿ ಸಂತೋಷಗೊಂ

ಡು ಅದ್ವೈತಿಯಂತೆ ಅವನ್ನೆಲ್ಲಾ ಸುಳ್ಳಾದ ಕಾರ್ಯಗಳೆಂದು ಹೇಳುವುದು ಸರಿಯಲ್ಲ. ಹೀಗೆ ಹೇಳಿದರೆ ಜೀವತ್ವವು ತಪ್ಪುವುದೂ ಇಲ್ಲ.

---

೭೩. ಹುಟ್ಟದ ಯೋನಿಗಳಿಲ್ಲ | ಮೆಟ್ಟದಾ ನೆಲನಿಲ್ಲ
ಕಷ್ಟಪರಿಭವಕೆ—ಕಡೆಯಿಲ್ಲ ಶಿವಜ್ಞಾನ
ಭ್ರಷ್ಟ ನೀನೆಂತು ಬ್ರಹ್ಮನೈ

ತಾತ್ಪರ್ಯ

ಹಿಂದಿನಜನ್ಮದಲ್ಲಿ ಅನೇಕ ಯೋನಿಗಳಲ್ಲಿ ಹುಟ್ಟಿ ಅನೇಕ ಭೂಮಿಗಳಲ್ಲಿ ವಾಸವಾಗಿದ್ದು ಈಗ ಕಷ್ಟಪಡುತ್ತಿರುವದು, ತೊಂದರೆ ಅನುಭವಿಸುವದು, ಇದಕ್ಕೆ ಕೊನೆಯೇ ಇಲ್ಲ. ಶಿವಜ್ಞಾನವಿಲ್ಲದವನಾದ ನೀನು ಹೇಗೆ ಬ್ರಹ್ಮ(ಶಿವ)ನಾಗುವೆ. (ಶಿವನ ಕೂಡುವಿಕೆಯ ಸಾಧನ ಜ್ಞಾನವೇ ಶಿವಜ್ಞಾನವು.)

ವಿಚಾರ

ಶಿವಜ್ಞಾನವು ಉಂಟಾದರೆ ಎಂದರೆ, ತನ್ನ ದೇಹ, ಮನಸ್ಸು, ಭಾವಗಳು ಶಿವ (ಬ್ರಹ್ಮ) ವಾಗಿರುವವೆಂದು ತಿಳಿದು ಇದರಂತೆ ಆಚರಿಸಿದರೆ, ತಾನು ಮನುಷ್ಯನೇ ಅಲ್ಲವಾದ್ದರಿಂದ ಹಿಂದೆ ಮನುಷ್ಯನಾಗಿ ಪಡೆದ ಕರ್ಮ ಫಲಭೋಗಗಳು ಈಗ ಸೇರುವದಿಲ್ಲ. ಇದರಲ್ಲಿ ಸ್ವಲ್ಪತಪ್ಪಿದರೆ ಅವು ತನ್ನನ್ನು ಬಿಡುವುದಿಲ್ಲ. ಹಾಗೆ ಅವುಗಳನ್ನು ಅನುಭವಿಸಿಯೇ ತೀರಬೇಕಾದುದರಿಂದ ಮತ್ತೆ ಹುಟ್ಟಬೇಕಾಗುತ್ತದೆ.

ಪ್ರಮಾಣ

ಮುಕ್ತಿಕೋಪನಿಷತ್—ಶ್ಲೋಕ ೧೬

ಜನ್ಮಾಂತರ ಶತಾಭ್ಯಾಸಾತ್ತ ಮಿಥ್ಯಾ ಸಂಸಾರವಾಸನಾ
ಸಾ ಚಿರಾಭ್ಯಾಸ ಯೋಗೇನ ವಿನಾ ನ ಕ್ಷೀಯತೇ ಕ್ವಚಿತ್

ಭಾವಾರ್ಥ

ಜೀವನಿಗೆ ನೂರಾರು ಜನ್ಮಗಳಿಂದ ಅಭ್ಯಾಸವಾಗಿ ಬಂದ ಸಂಸಾರ ವಾಸನೆಯು ಪ್ರಯೋಜನವಿಲ್ಲದುದು (ವ್ಯರ್ಥವಾದುದು). ಅದು ಬ್ರಹ್ಮ (ಶಿವ) ನ ಕೂಡುವಿಕೆಯ ಅಭ್ಯಾಸ (ಸಾಧನ) ದಿಂದಲ್ಲದೆ ಎಲ್ಲಿಯೂ ನಾಶವಾಗುವದಿಲ್ಲ.

---

೭೪. ನಾನಾ ಜನ್ಮದಿ ಹುಟ್ಟಿ | ನಾನಾಹಾರವನುಂಡು
ನಾನಾ ಪರಿಭವದಿ—ತೊಳಲುವ ಅಜ್ಞಾನ

ಬಿನುಗೆ ನೀನೆಂತು ಬ್ರಹ್ಮವೈ?

ತಾತ್ಪರ್ಯ

ವಿಧವಿಧವಾದ ಜನ್ಮಗಳಲ್ಲಿ ಹುಟ್ಟಿ ವಿಧವಿಧವಾದ ಆಹಾರಗಳನ್ನು ಉಂಡು ವಿಧವಿಧವಾದ ಕಷ್ಟಗಳಿಂದ ತೊಂದರೆ ಪಡುತ್ತಿರುವ ಅಜ್ಞಾನದ ಆಡಂಬರವುಳ್ಳವನೇ, ನೀನು ಹೇಗೆ ಬ್ರಹ್ಮ?

ಸಾಕ್ಷಿ

ನಾನಾಯೋನಿ ಸಹಸ್ರಾಣಿ ಗತ್ವಾ ಚೈವಂತು ಮಾಯಯಾ
ಭುಕ್ತ್ವಾಪಿ ವಿವಿಧಾಹಾರಾನ್ ಪೀತ್ವಾ ಚ ವಿವಿಧಾಂಸ್ತನಾನ್

ಭಾವಾರ್ಥ.

ಮಾಯೆಯುದೆಸೆಯಿಂದ ಅನೇಕ ಸಹಸ್ರ ಯೋನಿಗಳಲ್ಲಿ ಹೋಗಿ ಅನೇಕ ಆಹಾರಗಳನ್ನು ಉಂಡು ಅನೇಕ ಮೊಲೆಗಳನ್ನು ಕುಡಿದು (ಇದು ಜೀವನ ಜನ್ಮ ಜನ್ಮಗಳ ಆಲೆದಾಟವನ್ನು ವಿವರಿಸುತ್ತದೆ.)

ವಿಚಾರ.

ಹಿಂದಿನ ಜನ್ಮದ ಆಹಾರ, ಕೃತ್ಯಗಳಿಗನುಸಾರವಾಗಿ ಈ ಜನ್ಮದ ಬುದ್ಧಿ ಮತ್ತು ಕಾರ್ಯಗಳು ಉಂಟಾಗುತ್ತವೆ. ಮಾತಿನಲ್ಲಿ ಬ್ರಹ್ಮನಾಗಿ ಕೃತಿಯಲ್ಲಿ ಆಗದಿದ್ದರೆ ಅವು ಬದಲಾವಣೆಯನ್ನು ಹೊಂದದೆ ಹಿಂದಿನ ಜನ್ಮದ ಫಲವನ್ನೇ ಕೊಡುತ್ತವೆ. ಆದ್ದರಿಂದ ಬರೀಮಾತು ಫಲವಿಲ್ಲ.

---

೭೫. ಜನನವಾಗಲಿ ಮರಣ | ಮರಣವಾಗಲಿ ಜನನ
ಜನನ ಮರಣದಲಿ—ತೊಳಲುವಾ ಅಜ್ಞಾನ
ಬಿನುಗೆ ನೀನೆಂತು ಬ್ರಹ್ಮವೈ?

ತಾತ್ಪರ್ಯ

ಹುಟ್ಟಿದ ಮೇಲೆ ಸಾಯುವುದು ಸತ್ತ ಮೇಲೆ ಹುಟ್ಟುವುದು ಹೀಗೆ ಹುಟ್ಟು ಸಾವುಗಳಲ್ಲಿ ತೊಂದರೆ ಪಡುತ್ತಿರುವ ಅಜ್ಞಾನದ ಆಡಂಬರವುಳ್ಳವನೇ ನೀನು ಹೇಗೆ ಬ್ರಹ್ಮ?

ವಿಚಾರ

'ಸೋಹಂ' (ಆ ಬ್ರಹ್ಮವೇ ನಾನು) ಎಂದ ಮಾತ್ರಕ್ಕೆ ಅದು ಶ್ರೇಷ್ಠನಾದ ಜ್ಞಾನವಲ್ಲ. ಇಂಥಾ ಜ್ಞಾನವನ್ನು ಹೊಂದಿದವನನ್ನು ಅಜ್ಞಾನಿ

ಎಂದೇ ತಿಳಿಯಬೇಕು. ಇವನಿಗೆ ಜನನ ಮರಣಗಳು ಇದ್ದೇ ಇರುವವು. ತನು (ತಾನು), ಜಗತ್ತು, ಬ್ರಹ್ಮ, ಈ ಮೂರು ಒಂದೇ ರೂಪವೆಂದು ತಿಳಿವುದು ಮತ್ತು ಅದರಂತೆ ಆಚರಿಸುವುದು ಸಮ್ಯಗ್ ಜ್ಞಾನವು. ಈ ಜ್ಞಾನವನ್ನು ಹೊಂದಿದವನಿಗೆ ಜನ್ಮವಿಲ್ಲ.

ಪ್ರಮಾಣ

ತ್ರಿಶಿಖಿ ಬ್ರಾಹ್ಮಣ ಉಪನಿಷತ್ ಶ್ಲೋಕ ೧೬

ಅಹಂಕಾರಾಭಿಮಾನೇನ ಜೀವಃ ಸ್ಯಾದ್ಧಿ ಸದಾಶಿವಃ
ಸ ಚಾವಿವೇಕ ಪ್ರಕೃತಿ ಸಂಗತ್ವಾ ತತ್ರ ಮುಹ್ಯತೇ
ನಾನಾಯೋನಿ ಶತಂಗತ್ವಾ ಶೇತೇಽಸೌವಾಸನಾ ವಶಾತ್
ವಿಮೋಕ್ಷಾತ್ ಸಂಚರತ್ಯೇವಂ ಮತ್ಸ್ಯಃ ಕೂಲದ್ವಯಂ ಯಥಾ

ಭಾವಾರ್ಥ

ಸದಾಶಿವನು ಅಹಂಕಾರ (ನಾನು ಇದ್ದೇನೆ ಎಂಬ ಭಾವ) ದ ಅಭಿಮಾನವುಳ್ಳವನಾಗುವುದರಿಂದ ಜೀವನಾಗುತ್ತಾನೆ. ಈ ಜೀವನು ಅವಿವೇಕದಿಂದ ಪ್ರಪಂಚವನ್ನು ಪ್ರಕೃತಿ ಎಂದು ತಿಳಿದು (ಶಿವಜ್ಞಾನವನ್ನು ಕಳೆದುಕೊಂಡು) ಆ ಪ್ರಕೃತಿಯೊಡನೆ ಕೂಡಿ ಮೋಹಪಡುತ್ತಾನೆ. ಮತ್ತು ಅನೇಕ ವಿಧವಾದ ನೂರಾರು ಯೋನಿಗಳಲ್ಲಿ ಹೊಕ್ಕು ವಾಸನಾ ಬಲದಿಂದ ಮಲಗುತ್ತಾನೆ. ಒಂದನ್ನು ಬಿಟ್ಟರೆ ಮತ್ತೊಂದಕ್ಕೆ ಹೋಗುತ್ತಾನೆ, ಮೀನು ಒಂದು ನೀರಾಸರೆಯನ್ನು ಬಿಟ್ಟು ಮತ್ತೊಂದಕ್ಕೆ ಹೋಗುವಂತೆ.

ಸಾಕ್ಷಿ

ಮೃತಶ್ಚಾಪಿ ಪುನರ್ಜಾತೋ ಜಾತಶ್ಚಾಪಿ ಪುನರ್ಮೃತಃ
ನಾನಾ ಯೋನಿ ಸಹಸ್ರಾಣಿ ಮಾಯಾಜೀವ ಸಮಾಶ್ರಿತಃ

ಭಾವಾರ್ಥ

ಮಾಯಾಜೀವವನ್ನು ಆಶ್ರಯಿಸಿದವನು ಸತ್ತವನಾದರೂ ಮತ್ತೆ ಹುಟ್ಟತಕ್ಕವನು, ಹುಟ್ಟಿದವನಾದರೂ ಮತ್ತೆ ಸಾಯತಕ್ಕವನು. ಹೀಗೆ ಅನೇಕ ಸಹಸ್ರಯೋನಿಗಳಲ್ಲಿ ತಿರುಗುವಿಕೆಯುಂಟು.

ವಿಚಾರ

ಮರದಿಂದ ಬೀಜ, ಬೀಜದಿಂದ ಮರ. ಹೀಗೆ ನಡೆದಿರುವುದು ಎಲ್ಲರಿಗೂ ಗೊತ್ತೇ ಇದೆ. ಯಾವ ಬೀಜವು ಸಂಪೂರ್ಣವಾಗಿ ಸುಡಲ್ಪ

ಟ್ಟದೆಯೋ ಅದು ಮತ್ತೆ ಮರವಾಗಿ ಹುಟ್ಟುವದಿಲ್ಲ. ಇದರಂತೆ ಮನುಷ್ಯನು ತಿರುಗಿ ಹುಟ್ಟದೆ ಇರಬೇಕಾದರೆ ಅವನು ಸಂಪೂರ್ಣವಾಗಿ ಸಂಸ್ಕಾರವನ್ನು ಹೊಂದಬೇಕು. ಮನಸ್ಸಿಗೆ ಮಾತ್ರ ಸಂಸ್ಕಾರವುಂಟು. ದೇಹಕ್ಕೆ ಸಂಸ್ಕಾರವಿಲ್ಲ, ಎಂದರೆ ಅವನು ಪೂರ್ಣವಾಗಿ ಸಂಸ್ಕಾರವನ್ನು ಹೊಂದಿದಂತೆ (ಸುಡಲ್ಪಟ್ಟಂತೆ) ಆಗುವದಿಲ್ಲ. ದೇಹದ ಕಾಮವು ಮನಸ್ಸನ್ನು ವ್ಯಾಪಿಸಿಕೊಂಡೇ ಇರುತ್ತದೆ. ಆದುದರಿಂದ ಇವನು ಮಾಯಾಜೀವವನ್ನು ಆಶ್ರಯಿಸಿಕೊಂಡವನೇ ಆಗಿರುತ್ತಾನೆ. ಆದುದರಿಂದ ಇಂತಹ ಜೀವನಿಗೆ ಬಿಡುಗಡೆಯೇ ಇಲ್ಲ.

---

೬೬. ಮಾಯೆಯೇ ತನ್ನಯಾ (ತನತಪ್ಪ?) । ಕಾಯ ಮನವಾಗಿರಲು
ಮಾಯೆ ಎಮಗಿಲ್ಲ—"ಎಂದುಲಿವ ಅದ್ವೈತ" (ಎಂಬವಾಗದ್ವೈತ)
ನಾಯ ಮಾತುಗಳು 'ಸೊಗಸುನವೆ'? (ಸೊಗಸಲ್ಲ)

ತಾತ್ಪರ್ಯ

ತನ್ನ ದೇಹವೇ ತನ್ನ ಮನವೇ ಮಾಯೆಯಾಗಿದೆ. ಇಂಥಾದ್ದರಲ್ಲಿ ತನಗೆ ಮಾಯೆಯಿಲ್ಲವೆಂದು ಹೇಳುವ ಅದ್ವೈತಿಯ (ನಾಯ= ನಾಯಿಯಂತೆ ಸುಮ್ಮನೆ ಬೊಗಳುವವನ) ಮಾತುಗಳು ಅದಕ್ಕೆ ತಕ್ಕ ನಡತೆಯಿಲ್ಲದಿರುವದರಿಂದ ಯೋಗ್ಯವಾಗಿ ಕಾಣುತ್ತವೆಯೇ? (ಕಾಣುವದಿಲ್ಲ)

ವಿಚಾರ

ಕಾಯ ಮನ ಈ ಎರಡನೂ ಜಡವೆಂದು ತಿಳಿದು ಜೀವವು ಬ್ರಹ್ಮವೆಂದ ಮಾತ್ರಕ್ಕೆನೇ ತನಗೆ ಮಾಯೆ ಇಲ್ಲವೆಂದು ಬರಿಯ ಮಾತಿನ ಅದ್ವೈತಿಯು ಹೇಳುತ್ತಾನೆ. ಜಡವಸ್ತುಗಳೆಂದು ತಾನು ತಿಳಿದಿರುವ ತನುಮನಗಳೇ ಮಾಯೆಯಾಗಿ ಜೀವನನ್ನು ಆಶ್ರಯಿಸಿಕೊಂಡಿರುವುದು ಅವನಿಗೆ ಗೊತ್ತೇ ಇಲ್ಲ.

ಸಾಕ್ಷಿ

ಯಥಾನಾದಿ ಮಲಂ ಚೈವ ಪಶುತ್ವಂ ಪರಿಕೀರ್ತಿತಂ ।
ತುಷ 'ಕಂಭೂತ' (ಕಂಚುಕ?) ವತ್ ಜ್ಞಾತಂ ಯಥಾ ಬೀಜಂ
ತಥಾಂಕುರಂ

## ಭಾವಾರ್ಥ

ಅನಾದಿ ಮಲವನ್ನು ಹೊಂದಿಕೊಂಡಿರುವದೇ ಪಶುತ್ವವು. ಒಂದು ಬೀಜವು ಸಿಪ್ಪೆಯನ್ನು ಹೊದ್ದಿಸಿಕೊಂಡು ಇರುವ ರೀತಿಯಲ್ಲಿ ಈ ಪಶುತ್ವವಿದೆ ಎಂದು ತಿಳಿಯಬೇಕು. ಬೀಜವು ಸಿಪ್ಪೆಯೊಡನೆ ಕೂಡಿದ ಸ್ಥಿತಿಯಲ್ಲಿ ಇದ್ದಂತೆ ಬಿತ್ತಿದರೆ ಅದರಂತೆ ವೃಕ್ಷವು (ಬೆಳೆಯು) ಆಗುತ್ತದೆ. (ಹಾಗೆಯೇ ಪಶುತ್ವವುಳ್ಳವನು ಮತ್ತೆ ಹುಟ್ಟುತ್ತಾನೆ.)

## ವಿಚಾರ

ಜೀವನಿಗೆ ಅನೇಕ ಜನ್ಮಗಳ ಪರಂಪರೆಯ ದೆಸೆಯಿಂದ ಅನಾದಿ ಮಲವು ( ನಾನು ಜೀವನು ಮತ್ತು ದೇಹಮನಗಳುಳ್ಳವನು ಎಂಬ ತಿಳಿವಳಿಕೆಯ ಆಚರಣೆಯು)ಪ್ರಾಪ್ತವಾಗಿರುತ್ತದೆ. ಇದೇ ಪಶುತ್ವ (ಅಜ್ಞಾನ)ವು. ಸಿಪ್ಪೆಯನ್ನು ಹೊದ್ದಿಸಿಕೊಂಡ ಬೀಜದಂತೆ ಈ ಪಶುತ್ವವಿರುತ್ತದೆ. ಹೊಟ್ಟು ಸಹಿತವಾದ ಭತ್ತವು ಹುಟ್ಟುವಂತೆ ಈ ಪಶುತ್ವವುಳ್ಳ ಅಜ್ಞಾನಿಯು ಮತ್ತೆ ಹುಟ್ಟುತ್ತಾನೆ. ಈ ಪಶುತ್ವವೆಂಬ ಭತ್ತವು ಇದ್ದಹಾಗೆ ಅವನ ಮುಂದಿನ ಜನ್ಮವೆಂಬ ಪೈರು ಬೆಳೆಯುತ್ತದೆ. ಭತ್ತದ ಸಿಪ್ಪೆಯನ್ನು ತೆಗೆದರೆ ಉಳಿದ ಬರೀ ಅಕ್ಕಿಯು ಹೇಗೆ ಹುಟ್ಟಲಾರದೋ ಹಾಗೆ ಅಜ್ಞಾನವನ್ನೂ ಆ ಅಜ್ಞಾನದ ಆಚರಣೆಯನ್ನೂ ಕಳೆದ ಆತ್ಮನು ಮರಳಿ ಹುಟ್ಟುವುದಿಲ್ಲ.

## ಪ್ರಮಾಣ

### ಸ್ಕಂದೋಪನಿಷತ್ ಶ್ಲೋಕ ೨

ತುಷೇಣ ಬದ್ಧೋ ವ್ರೀಹಿಃ ಸ್ಯಾತ್ ತುಷಾಭಾವೇನ ತಂಡುಲಃ
ಏವಂ ಬದ್ಧ ಸ್ತಥಾ ಜೀವಃ ಕರ್ಮನಾಶೇ ಸದಾಶಿವಃ

## ಭಾವಾರ್ಥ

ಹೊಟ್ಟಿನಿಂದ ಕೂಡಿದಾಗ ಭತ್ತವಾಗುತ್ತದೆ. ಹೊಟ್ಟಿಲ್ಲದೆ ಹೋದರೆ ಅಕ್ಕಿಯಾಗುತ್ತದೆ. ಇದರಂತೆ ಕರ್ಮ (ನಾನು ಮನುಷ್ಯನು ಎಂಬ ಭಾವನೆಯುಳ್ಳ ಕೆಲಸ )ದಿಂದ ಕೂಡಿದರೆ ಜೀವನಾಗುತ್ತಾನೆ. ಕರ್ಮವು ನಾಶವಾದರೆ ಸದಾಶಿವನಾಗುತ್ತಾನೆ.

---

೬೭. ಮಾತು ಎಲ್ಲ ಬ್ರಹ್ಮವು | ನೀತಿ ಎಲ್ಲವಧಮವು
ಮಾತಿನಿಂ ಬ್ರಹ್ಮ—ತಾನೆಂಬ ಅಧಮರಿಗೆ
ಆತುಕೊಂಡಿಹುದು ಭವಮಾಲೆ

ತಾತ್ಪರ್ಯ

ಮಾತಿನ ಬ್ರಹ್ಮನಿಗೆ ತಾನಾಡುವ ಎಲ್ಲಾ ವಚನಗಳು ಬ್ರಹ್ಮಮಯವಾಗಿರುತ್ತವೆ ನಡೆಯುವ ನಡತೆ ಎಲ್ಲವೂ ಅಧಮ ( ಪಶುವಿಗೆ ಸಮಾನ ) ವಾಗಿ ಇರುತ್ತದೆ. ಮಾತಿನಿಂದಲೇ ಬ್ರಹ್ಮ ಎಂದು ಹೇಳುವ ಈ ಅಧಮರಿಗೆ ಮರಳಿ ಮರಳಿ ಹುಟ್ಟಿಬರುವ ಜನ್ಮಗಳ ಪರಂಪರೆಯು ವ್ಯಾಪಿಸಿಕೊಂಡಿರುತ್ತದೆ.

ವಿಚಾರ

ಬ್ರಹ್ಮನಾದವನಿಗೆ ಬ್ರಹ್ಮನಂತಿರುವ ನಡತೆಯಿರಬೇಕು. ಬ್ರಹ್ಮನಿಗೆ ಹಸಿವು ತೃಷೆಗಳಿಲ್ಲ. ಮಾತಿನಲ್ಲಿ ಬ್ರಹ್ಮಿಯಾದವನು ಹಸಿವು ತೃಷೆಗಳನ್ನು ಅನುಭವಿಸುವದರಿಂದ ಅವನ ನಡತೆಯು ಲೋಕದ ಪ್ರಾಣಿಗಳಂತೆ ಆಗಿದೆ. ನಾನು ಬ್ರಹ್ಮ ಎಂದ ಮೇಲೆ ಹೇಗಿದ್ದರೂ ಅಡ್ಡಿಯಿಲ್ಲವೆಂದು ಪಶುಗಳಂತೆ ಸ್ವೇಚ್ಛಾಚಾರದ ನಡತೆ (ನೀತಿ) ಉಳ್ಳ ಅಧಮರಿಗಂತೂ ಮನುಷ್ಯ ಜನ್ಮಕ್ಕಿಂತ ಕೆಳಗಿನ ಜನ್ಮವೇ ಸರಿ.

ಸಾಕ್ಷಿ

ಅಹಂ ಮಮತ್ವಂಚ ಭವಸ್ಯ ಬೀಜಂ
ನಾಹಂ ಮಮತ್ವಂ ಭವಬೀಜ ನಾಶಂ |
ಬೀಜೇ ಪ್ರಣಷ್ಟೇ 'ಸತಿನೈವ' (ಕುತ ಏವ) ಜನ್ಮಂ
ನಿರಿಂಧ'ನೋ'(ನಾದ್) ವಹ್ನಿರುಪೈತಿ ಶಾಂತಿಂ

ಭಾವಾರ್ಥ

ನಾನು ನನ್ನದೆಂದು ತಿಳಿದು ನಡೆವುದು ಜನ್ಮದ ಬೀಜವು. ನಾನು ನನ್ನದೆಂದು ಭಾವಿಸದೆ ಇರುವುದು ಜನ್ಮದ ಬೀಜವು ನಾಶವಾಯಿತೆಂಬುದಕ್ಕೆ ಗುರುತು. ಬೀಜವು ನಷ್ಟವಾದರೆ (ಸುಡಲ್ಪಟ್ಟರೆ) ಮರವು ಹೇಗೆ ಅದರಿಂದ ಹುಟ್ಟುವದಿಲ್ಲವೋ ಹಾಗೆ ನಾನು ನನ್ನದೆಂದು ಭಾವನೆ ಇಲ್ಲದಿರುವ ಜ್ಞಾನವೆಂಬ ಅಗ್ನಿಯಿಂದ ಸುಡಲ್ಪಟ್ಟವನಿಗೆ ಜನ್ಮವು 'ಇಲ್ಲವೇ ಇಲ್ಲ' (ಎಲ್ಲಿಂದ ಬರುವದು?) ಕಟ್ಟಿಗೆ ಇಲ್ಲದ (ಇಲ್ಲವಾದರೆ) ಬೆಂಕಿಯು ತಾನೇ ಶಾಂತಿಯನ್ನು ಹೊಂದುತ್ತದೆ.

## ವಿಚಾರ

ಬೆಂಕಿಯು ತಾನು ವ್ಯಾಪಿಸಿದ ಕಟ್ಟಿಗೆಯನ್ನು ಸುಡುತ್ತಾ ಸುಡು ತ್ತಾ ಮುಂದೆ ಕಟ್ಟಿಗೆ ಇಲ್ಲದೆ ಇದ್ದರೆ ಹೇಗೆ ಶಾಂತಿಯನ್ನು ಹೊಂದಿ ಸುಮ್ಮನಾಗುವುದೋ ಹಾಗೆ ಜೀವನು ತನ್ನ ಮುಂದೆ ಇರುವ ಪ್ರಪಂಚ ವನ್ನು ನಾನು ನನ್ನದು ಎಂದು ಅನುಭವಿಸುತ್ತಾ ಅನುಭವಿಸುತ್ತಾ ಬಂದು ಮುಂದೆ ಅನುಭವಿಸಲಿಕ್ಕೆ ಪ್ರಪಂಚವೇ ಇಲ್ಲವೆಂಬ ಭಾವನೆಯನ್ನು ಯಾ ವಾಗ ಹೊಂದಿ ಸರ್ವವೂ ಬ್ರಹ್ಮ ಸ್ವರೂಪವೆಂದು ಯಾವಾಗ ತಿಳಿದು ಆಚರಿಸುವನೋ ಆಗ ಅವನು ಉಪಭೋಗಿಸುವ ವಸ್ತುಗಳಿಲ್ಲದೆ ತಾನೇ ಶಾಂತಿಯನ್ನು ಹೊಂದುತ್ತಾನೆ.

## ಪ್ರಮಾಣ

ಮಹೋಪನಿಷತ್ ನಾಲ್ಕನೆಯ ಅಧ್ಯಾಯ ಶ್ಲೋಕ ೧೨೫

ಋಭುವು ನಿದಾಘನಿಗೆ ಹೇಳುತ್ತಾನೆ.

ಮಮಪುತ್ರೋ ಮಮಧನಮಹಂ । ಸೋಽಯಮಿದಂ ಮಮ
ಇತೀಯ ಮಿಂದ್ರ ಜಾಲೇನ ವಾಸನೈವ ವಿವಲ್ಗತಿ
ಮಾಭವಾಜ್ಞೋಭವ ಜ್ಞಸ್ತ್ವಂ ಜಹಿ ಸಂಸಾರಭಾವನಾಂ

## ಭಾವಾರ್ಥ

ನನ್ನ ಮಗ, ನನ್ನ ಹಣ, ನಾನು, ಅವನು, ಅದು, ಇದು, ನನ್ನದು, ಹೀಗೆಂಬ ವಾಸನೆಯಲ್ಲಿ ಕೂಡಿರುವುದು ಇಂದ್ರಜಾಲವು. ನೀನು ಅಜ್ಞಾ ನಿ ಆಗಬೇಡ, ಜ್ಞಾನಿ (ಈಶ) ಆಗಿ ಸಂಸಾರ ಭಾವನೆಯನ್ನು ಬಿಡು.

---

೩೮. ವಾಗ್ ಬ್ರಹ್ಮವನು ಕಲಿತು । ಅಹಂ ಬ್ರಹ್ಮ ವೆನಬೇಡ
ಅಹಂ ಬ್ರಹ್ಮವೆಂದು — ಅಜ ಶಿರವ ನೀಗಿದನು
ಅಹಂ ಬ್ರಹ್ಮ ವೆಂಬುದದುಸಲ್ಲ

## ತಾತ್ಪರ್ಯ

ಎಲೋ ಮನುಷ್ಯ ಬ್ರಹ್ಮನೇ, (ನಡತೆಯಲ್ಲಿ ಮನುಷ್ಯನಾಗಿ ಮಾತಿನಲ್ಲಿ ಬ್ರಹ್ಮನಾದವನನು ಮನುಷ್ಯ ಬ್ರಹ್ಮನು) ನೀನು ಮಾತಿನಲ್ಲಿ ಬ್ರಹ್ಮನಾ ಗುವ ಶಾಸ್ತ್ರವನ್ನು ಕಲಿತು 'ಅಹಂ ಬ್ರಹ್ಮಾಸ್ಮಿ' (ನಾನು ಬ್ರಹ್ಮನಿದ್ದೇನೆ) ಎಂದು ಎನಬೇಡ, ಹೀಗೆ ಹೇಳಿ ಬ್ರಹ್ಮನು ತನಗಿದ್ದ ೫ ತಲೆಗಳಲ್ಲಿ

ಒಂದು ತಲೆಯನ್ನು ಕಳೆದುಕೊಂಡು ನಾಲ್ಕು ಮುಖ (ಚತುರ್ಮುಖ) ನಾದನು. ಆದುದರಿಂದ ಹೀಗೆ ಹೇಳುವದು ಅಹಂಕಾರದ ಮಾತು, ಇದು ಸರಿಯಲ್ಲ.

ಸಾಕ್ಷಿ

ಹಸ್ತಾಂಗುಷ್ಠ ನಖೇನಾಶು ವಾಮೇನಸ್ಯಾಜ್ಞಯೈವ ಹಿ
ಚಕ್ರೇಹ್ಯೇಷ ಮಹಾ ಘೋರೋ ಬ್ರಹ್ಮಣಃ ಪಂಚಮಂ ಶಿರಃ

ಭಾವಾರ್ಥ

ಮಹಾ ಘೋರನಾದ ಶಂಕರನು ಎಡಗಡೆಯ ಕೈಯ ಹೆಬ್ಬೆರಳಿನ ಉಗುರಿನಿಂದ ಬ್ರಹ್ಮನ ಐದನೆಯ ಶಿರಸ್ಸನ್ನು ಆತನ ಅಜ್ಞಾನದ ದೆಸೆಯಿಂದ ಚಿವುಟಿದನು (ಕತ್ತರಿಸಿದನು.)

ವಿಚಾರ

ಶಂಕರ, ವಿಷ್ಣು, ಬ್ರಹ್ಮ ಎಂಬ ತ್ರಿಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮನಿಗೆ ಮೊದಲು ಐದು ತಲೆಗಳಿದ್ದವೆಂದೂ ಅವನು ನಾನೇ ದೊಡ್ಡವನು (ಅಹಂ ಬ್ರಹ್ಮಾಸ್ಮಿ.) ಎಂದು ಅಹಂಕಾರದ ಮಾತುಗಳನ್ನಾಡಲು ಶಂಕರನು ಅಹಂಕಾರಕ್ಕಾಗಿ ಅವನ ತಲೆಯನ್ನು ಕತ್ತರಿಸಿದನೆಂದೂ ಪುರಾಣದ ಹೇಳಿಕೆ ಇದೆ.

ವಿಚಾರ

ನಾನು ದೊಡ್ಡವನು ಎಂದು ಅಹಂಕಾರ ಪಡುವವನು ಮುಕ್ತಿಮಾರ್ಗದ ಮೊದಲನೆಯ ಸೋಪಾನವನ್ನೇ ಇನ್ನೂ ಹತ್ತಿರುವುದಿಲ್ಲ. ದಾಸೋಹಂಭಾವದ ಬೀಜವೇ ಅವನಿಗೆ ತಿಳಿದಿಲ್ಲ ಅವನು ಜೀವನಾಗಿ ಮತ್ತೆ ಹುಟ್ಟುತ್ತಾನೆ.

---

೬೯. ಹರಿಯಜರು ಅಡಿಮುಡಿಯ । ನರಸಿಕಾಣದ ಮುನ್ನ
ವರವೇದ ನಿಗಮ—ಶಾಸ್ತ್ರಂಗಳ್ ಕಾಣದನ
ಅರಿಯೆ ನಿನ್ನಳವೆ ವಾಗ್‌ಬ್ರಹ್ಮ

ತಾತ್ಪರ್ಯ

ಒಣಮಾತಿನ ಬ್ರಹ್ಮಿಯೇ, ವಿಷ್ಣುವು ಪಾದವನ್ನೂ, ಬ್ರಹ್ಮನು ಶಿರವನ್ನೂ ಹುಡುಕಿದರೂ ಸಿಕ್ಕದೆ ಇರುವಂಥವನನ್ನು ಮೊದಲು ವೇದ ಆಗಮ ಶಾಸ್ತ್ರಗಳು ಕಾಣದೆ ಇರುವಂಥವನನ್ನು ತಿಳಿಯಲು ನಿನಗೆ ಸಾಧ್ಯವೇ?

ಉರುಲಿಂಗದ ಪಾದವನ್ನು ವಿಷ್ಣುವು ವರಾಹರೂಪದಿಂದಲೂ ಬ್ರಹ್ಮನು ಆ ಲಿಂಗದ ಶಿರಸ್ಸನ್ನು ಹದ್ದಿನ ರೂಪದಿಂದಲೂ ನೋಡುವುದಕ್ಕೆ ಹೋಗಿ ಕಾಣಲಿಲ್ಲವೆಂಬುದು ಪುರಾಣ ಪ್ರಸಿದ್ಧವು. ಆದುದರಿಂದ ಲಿಂಗದ ಮಹಿಮೆಯು ಶ್ರೇಷ್ಠವು. ಲಿಂಗವೇ ಸಾಕಾರ ಬ್ರಹ್ಮವು ಶಿವಶಕ್ತಿಗಳೊಡನೆ ಕೂಡಿದ ಬಾಹ್ಯ ಸ್ವರೂಪವನ್ನೇ ಈ ರೀತಿ ಕಾಣದೆ ಇರುವಾಗ ಸ್ವಸ್ವರೂಪಾನು ಸಂಧಾನವು ಅವರಿಗೆಲ್ಲಿಯದು?

ವಿಚಾರ

ಇಲ್ಲಿ ಕಣ್ಣಿಗೆಕಾಣುವ ಲಿಂಗವು ನಿರಾಕಾರ ರೂಪವು ಎಂಬ ಭಾವನೆಯಿಂದ ಹೇಳಲ್ಪಟ್ಟಿರುತ್ತದೆ. ಶಿವ, ಶಕ್ತಿ ಇಬ್ಬರು ಕೂಡಿದ ತೋರಿಕೆಯೇ ಲಿಂಗವು. ಆದುದರಿಂದ ಇದು ನಿರಾಕಾರ (ನಿರ್ಗುಣ) ಇರುತ್ತದೆ. ನಿರಾಕಾರ (ನಿರಂಜನ) ಸ್ವರೂಪನಾದ ಪರಾತ್ಪರ ವಸ್ತುವನ್ನು ಸ್ವಸ್ವರೂಪಾನುಸಂಧಾನ ಎಂದರೆ ತನ್ನ ಸ್ವರೂಪದಲ್ಲಿ ತಿಳಿದು ಅಂತಹ ಸ್ವಸ್ವರೂಪವಾದ ಲಿಂಗಪೂಜೆ ಮೊದಲಾದವುಗಳಿಂದ ಆಚರಿಸುವುದು ಪ್ರಯೋಜನಕರವಾದುದೇ ಹೊರತು ಮಾತಿನಲ್ಲಿ ಬ್ರಹ್ಮ ಎಂದು ಹೇಳುವುದಾದರೆ ಮಾತಿನ ಚತುರತೆಯಲ್ಲಿ ಬಹು ಮುಖ್ಯಗಳೆನಿಸಿಕೊಂಡ ವೇದಾಗಮಗಳು ಏಕೆ ಕಾಣಲಿಲ್ಲ? ಅವುಗಳಿಗೂ ದೂರನೆಂದು ಶಿವನು ಏಕೆ ಭಾವಿಸಲ್ಪಟ್ಟನು?

ಪ್ರಮಾಣ

ಯೋಗತತ್ತ್ವೋಪನಿಷತ್ ಶ್ಲೋಕ ೬—೮

ನಾನಾ ಮಾರ್ಗೈಸ್ತು ದುಷ್ಪ್ರಾಪಂ ಕೈವಲ್ಯಂ ಪರಮಂ ಪದಂ
ಪತಿತಾಃ ಶಾಸ್ತ್ರ ಜಾಲೇಷು ಪ್ರಜ್ಞಯಾ ತೇನ ಮೋಹಿತಾಃ
ಅನಿರ್ವಾಚ್ಯಂ ಪದಂ ವಕ್ತುಂ ನ ಶಕ್ಯಂ ತೈಃ ಸುರೈರಪಿ
ಸ್ವಾತ್ಮ ಪ್ರಕಾಶರೂಪಂ ತತ್ ಕಿಂ ಶಾಸ್ತ್ರೇಣ ಪ್ರಕಾಶ್ಯತೇ
ನಿಷ್ಕಲಂ ನಿರ್ಮಲಂ ಶಾಂತಂ ಸರ್ವಾತೀತಂ ನಿರಾಮಯಂ

ಅನೇಕ ಮಾರ್ಗಗಳಿಂದಲೂ ಪಡೆಯುವದಕ್ಕೆ ಅಶಕ್ಯನಾದ ಕೇವಲ ಪರಮಪದನಾದ ಮಾತಿನಿಂದ ಹೇಳಲಾಗದ ಮಹಾದೇವನ ವಿಷಯವನ್ನು, ಶಾಸ್ತ್ರ ಜಾಲಗಳಲ್ಲಿ ಬಿದ್ದು ಆ ಬುದ್ಧಿಯಿಂದ ಮೋಹಿತರಾದವರೂ ದೇವತೆಗಳೂ ಸಹಾ ಹೇಳುವುದಕ್ಕೆ ಶಕ್ಯವಿಲ್ಲ. ಏಕೆಂದರೆ ಅವನು ತನ್ನ (ಆತ್ಮನ) ಲ್ಲಿ ಪರಂಜ್ಯೋತಿ ರೂಪನಾಗಿ ಇರುತ್ತಾನೆ. ಕಲೆಗಳಿಗೆ ಸಿಲುಕದವನಾದ ಮಲರಹಿತನಾದ ಶಾಂತನಾದ ಸರ್ವವನ್ನೂ ಮೀ

ರಿದವನಾದ ದೋಷರಹಿತನಾದ ಮಹಾದೇವನು ಶಾಸ್ತ್ರದಿಂದ ಹೇಗೆ ಪ್ರಕಾಶಿಸಲ್ಪಡುತ್ತಾನೆ. (ಇಲ್ಲಿ, ತಾನೇ ತನ್ನಲ್ಲಿ ನೋಡಿ ತಿಳಿದಾಚರಿಸಬೇಕೆಂಬ ಅಭಿಪ್ರಾಯವಿದೆ.)

ವಿಚಾರ

ಪರಬ್ರಹ್ಮದ ಸ್ವಸ್ವರೂಪಾನುಸಂಧಾನವೇ ಮತ್ತು ತನ್ನ ಆತ್ಮಪ್ರಕಾಶ ರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಲಿಂಗಧಾರಣ ಪೂಜಾದಿಗಳನ್ನು ಮಾಡುವುದು. ಹೀಗೆ ಸ್ವತಃ ಬಹ್ಮನಾಗುವದನ್ನು ಅನುಭವಿಸದೆ ಬರಿಯ ಮಾತಿನ ಬ್ರಹ್ಮನಾಗುವಿಕೆಯಿಂದ ಬ್ರಹ್ಮತ್ವವು ಸಿದ್ಧಿಸುವದಿಲ್ಲ. ಹಾಗೆ ಬ್ರಹ್ಮಾನುಸಂಧಾನಮಾಡಿದವನೇ ಪಂಡಿತನು.

———

೭೦. ವ್ಯಾಧ ರುದ್ರನ ನಿಜವ। ವೇದಂಗಳ್ ಕಾಣದಲೆ
ಹೋದವ್ವೆ ಅಡಿಯಾ—ಘ್ರಾಣಿಸುತ ಶ್ವಾನಿಯಾಗಿ
ವೇದಾಂತಿಗಳವೆ ಆ ಬ್ರಹ್ಮ

ತಾತ್ಪರ್ಯ

ವೇದಗಳ ಸ್ತೋತ್ರಕ್ಕೆ ಅಧಿಪತಿಯಾದ (ಬೇಡರವನ ರೂಪವನ್ನು ಧರಿಸಿದ) ರುದ್ರನ ನಿಜಸ್ಥಿತಿಯನ್ನು ವೇದಗಳು ಕಾಣದೆ, ಆ ರುದ್ರನ ಪಾದ(ಭಾಗ) ವನ್ನು ಮಾತ್ರ ಮೂಸಿನೋಡುತ್ತಾ ನಾಯಿಗಳಂತೆ ಆದವು. ಹೀಗಿರುವಲ್ಲಿ ವೇದಗಳ ಅಂತ್ಯಭಾಗವನ್ನು ತಿಳಿದವನಿಗೆ ಆ ಬ್ರಹ್ಮವು (ರುದ್ರನು) ಸಾಧ್ಯನಾಗುತ್ತಾನೆಯೇ ?

ಸಾಕ್ಷಿ

ಆಘ್ರಾಯಾಘ್ರಾಯ ವಿಂದಂತಿ ವೇದ ಶ್ವಾನಾಶ್ಯನೈಶ್ಯನೈಃ
ಯತ್ ಪದಾನಿ ಮಹಾರಣ್ಯೇ ತ್ವಾಂ ನಂದೇ ಶಬರೇಶ್ವರಂ

ತಾತ್ಪರ್ಯ

ಶಬರೇಶ್ವರನೇ, ಯಾರ ಪಾದಗಳನ್ನು ವೇದಗಳೆಂಬ ಶ್ವಾನಗಳು ಮಹಾರಣ್ಯದಲ್ಲಿ ಮೆಲ್ಲ ಮೆಲ್ಲಗೆ ಮೂಸಿನೋಡಿ ತಿಳಿಯುವವೋ ಅಂಥಾ ನಿನ್ನನ್ನು ನಮಸ್ಕರಿಸುತ್ತೇನೆ.

ವಿಚಾರ

ಅರ್ಜುನನಿಗೆ ಮಹಾರಣ್ಯದಲ್ಲಿ ಬೇಡನವೇಷದಿಂದ ಪ್ರತ್ಯಕ್ಷನಾದ ಶಬರೇಶ್ವರನನ್ನೇ ನಿರಾಕಾರ ರೂಪವೆಂಬ ಭಾವನೆಯಿಂದ ಈ ವಿಷಯವು ಹೇಳಲ್ಪಟ್ಟಿದೆ. ಹೀಗೆ ಹೇಳುವುದು ಹಿಂದೂಗಳ ಒಂದು ಪದ್ಧತಿ.

ಸಾಧಾರಣವಾಗಿ ತಾನು ಶಿವನೆಂದು ತಿಳಿದಿರುವ ಶಿವಶರಣನೂ ಕೂಡಾ ತಾನು ನಿರಾಕಾರ ಸ್ವರೂಪನೆಂಬ ಭಾವನೆಯಿಂದಲೇ ಈಗಲೂ ನಡೆ ಯುತ್ತಿರುವನು. ಶಿವಶರಣರು ಸ್ಥಾವರ ಲಿಂಗದ ಹೆಸರಿನಲ್ಲೇ ನಿರಾ ಕಾರ ವಸ್ತುವನ್ನು ಕರೆದಿರುತ್ತಾರೆ.

---

೭೧. ವೇದಂಗಳ್ ತಮ್ಮ ಱಿವಿಂ। ದಾದಿ ರುದ್ರನ ನಿಜವ
ವೇಧಿಸಲ್ಯಾರ—'ದಿತ್ತತ್ತ' (ದತ್ತಿತ್ತ) ತೊಳಲುತಿರೆ
ವೇದಾಂತಿಗಳವೆ ಆ ಬ್ರಹ್ಮ

ವೇಧಿಸು=ಸ್ಪರ್ಶಿಸು, ಮುಟ್ಟು.

ತಾತ್ಪರ್ಯ

ವೇದಗಳು ತಮ್ಮ ಜ್ಞಾನದಿಂದ ಆದಿ ರುದ್ರನನ್ನು ತಿಳಿಯಲಿಕ್ಕೆ ಶಕ್ತಿಯಿಲ್ಲದೆ ಆ ಕಡೆಗೆ ಈ ಕಡೆಗೆ ತೊಳಲುತ್ತಿರಲು ಒಣವಿಚಾರದ ಅದ್ವೈ ತಿಗೆ ಆ ಬ್ರಹ್ಮವು ಸಾಧ್ಯವೇ?

ವಿಚಾರ

ದೇವತೆಗಳ ಪ್ರಭವ ಮತ್ತು ಉದ್ಭವಕ್ಕೆ ಕಾರಣನೂ 'ವಿಶ್ವಾಧಿಪನೂ ರುದ್ರನೆಂದು ಶ್ವೇತಾಶ್ವತರ ಉಪನಿಷತ್ತು ಹೇಳುತ್ತದೆ. ಇಂತಹ ರುದ್ರನ ಆದಿಸ್ವರೂಪವೇ ಲಿಂಗವು. ತನುವನ್ನು ಲಿಂಗರೂಪವಾಗಿ ತಿಳಿದು ಆಚರಿ ಸುವ ಸ್ವಸ್ವರೂಪಾನುಸಂಧಾನವುಳ್ಳವನಾಗಿ ಶಿವನನ್ನು ಮುಟ್ಟಿರುವ ಶಿವಾದ್ವೈತಿಯ ಅನುಭಾವಕ್ಕೆ ತಿಳಿಯಲ್ಪಡುವವನಾಗಿ ಪರಾತ್ಪರವಸ್ತುವು ಪ್ರತ್ಯಕ್ಷನಾಗುವನಲ್ಲದೆ ಬರಿಯ ಮಾತಿಗೆ ನಿಲುಕುವುದಿಲ್ಲ.

ಸಾಕ್ಷಿ

ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ
ಆನಂದ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ

ತಾತ್ಪರ್ಯ

ಮಾತುಗಳೂ ಮನಸ್ಸೂ ಸಹ ಯಾರನ್ನು ಕಾಣಲಿಕ್ಕೆ ಹೋಗಿ ಹಾಗೆ ಕಾಣದೆ ಹಿಂತಿರುಗುವವೋ ಅಂಥಾ ಆನಂದ ಬ್ರಹ್ಮದ ಅನುಸಂಧಾನದ ದೆಸೆಯಿಂದ ಪಂಡಿತನಾದವನು ಯಾವುದರಿಂದಲೂ ಭಯಪಡುವದಿಲ್ಲ.

ಇದಕ್ಕೆ ೬೯ನೆಯ ಪದ್ಯದಲ್ಲಿ ಪ್ರಮಾಣವಿದೆ.

---

೭೨. ಬ್ರಹ್ಮವೆಂಬುದು ತಾನು। ಸುಮ್ಮನೊರ್ನುಡಿಯುಲ್ಲ
ಹೆಮ್ಮಳಿದು ಸಕಲ—ಸಂಸಾರ ನಿರ್ಲೇಪಿ
ಬ್ರಹ್ಮ ತಾನಹನು ಇದು ಸಹಜ

ತಾತ್ಪರ್ಯ

ಬ್ರಹ್ಮವೆಂಬುದು ಅದೊಂದು ಸುಮ್ಮನೆ ಆಡುವ ಮಾತು ಅಲ್ಲ, ಅಹಂಕಾರವನ್ನು ಮಾತಿನಲ್ಲಿಯೂ ನಡೆಯಲ್ಲಿಯೂ ಕೂಡಾ ನಾಶಮಾಡಿ ಸಮಸ್ತ ಸಂಸಾರದಲ್ಲಿ ಲೇಪವನ್ನು ಹೊಂದದೆ ಇರತಕ್ಕವನು ಬ್ರಹ್ಮನಾಗುತ್ತಾನೆ. ಇದು ನಿಜ.

ಪ್ರಮಾಣ

ತೇಜೋ ಬಿಂದೂಪನಿಷತ್ ಅಧ್ಯಾಯ ೧ ಶ್ಲೋಕ ೪೫

ಯೇಷಾಂ ವೃತ್ತಿಃ ಸಮಾವೃದ್ಧಾ ಪರಿಪಕ್ವಾ ಚ ಸಾ ಪುನಃ
ತೇ ವೈ ಸದ್ಬ್ರಹ್ಮತಾಂ ಪ್ರಾಪ್ತಾ ನೇತರೇ ಶಬ್ದವಾದಿನಃ

ಭಾವಾರ್ಥ

ಯಾರ ವೃತ್ತಿಯು ಚನ್ನಾಗಿ ಬಳೆಯಲ್ಪಟ್ಟದೂ ಸಂಪೂರ್ಣವಾಗಿ ಮಾಗಿದುದೂ ಆಗಿರುತ್ತದೆಯೋ ಅವರು ಸಾಕಾರ ಬ್ರಹ್ಮತ್ವವನ್ನು ಹೊಂದಿದವರು. ಅಹಂಬ್ರಹ್ಮವೆಂದು ಶಬ್ದದಲ್ಲಿ ಮಾತ್ರ ಹೇಳುವ ಉಳಿದವರು ಆ ಬ್ರಹ್ಮತ್ವವನ್ನು ಹೊಂದುವದಿಲ್ಲ.

ವಿಚಾರ

ಸೋಽಹಂ ಎಂದು ಅಷ್ಟರಲ್ಲೇ ತನ್ನ ಪರಿಣಾಮವಾಯಿತೆನ್ನುವುದು ಅಹಂಕಾರದ (ಸೊಕ್ಕಿನ) ಮಾತಾಗಿದೆ. ಸೋಽಹಂ ಭಾವನೆಯ ಜ್ಞಾನವು ಬಂದ ಒಡನೆಯೇ ತಾನು ತನ್ನದು ಎಂಬವುಗಳನ್ನೆಲ್ಲಾ ಶಿವನಿಗೆ ಅರ್ಪಿಸಿ ಶಿವನೇ ಆಗುವ ದಾಸೋಽಹಂ ಭಾವದ ನಡತೆಯನ್ನು ಹೊಂದಬೇಕು. ಬ್ರಹ್ಮವೃತ್ತಿಯು ಬೆಳೆಯಬೇಕು ಎಂಬುದರ ಪರಿಣಾಮವೇ ಈ ದಾಸೋಽಹಂ ಭಾವದ ನಡತೆಯು. ಇದನ್ನು ಅನುಸರಿಸಿದರೆ ಬ್ರಹ್ಮವೃತ್ತಿಯು ಮಾಗಿದಂತೆ ಆಗುತ್ತದೆ. ಆಗ ಪರಬ್ರಹ್ಮನ ಐಕ್ಯ (ಸಾಮರಸ್ಯ) ವು ದೊರಕಿದಂತೆ ಆಗುತ್ತದೆ.

---

೭೩. ಕಲ್ಲೊಳಗೆ ಕಿಚ್ಚಿರಲು । ಕಲ್ಲೇನು ಕಿಚ್ಚಹುದೆ
ಎಲ್ಲರೊಳು ಶಿವನ—ಕಳೆಯಿಹುದು ಅದರಂತೆ
ಇಲ್ಲೆಲವೊ ನಿನಗೆ ಬ್ರಹ್ಮತ್ವ

ತಾತ್ಪರ್ಯ

ಕಲ್ಲೊಳಗೆ ಬೆಂಕಿ ಇದ್ದಾಗ್ಯೂ ಕಲ್ಲೇ ಬೆಂಕಿಯಾಗಿಲ್ಲ. ಇದರಂತೆ ಎಲ್ಲರಲ್ಲಿಯೂ ಶಿವನಿದ್ದಾನೆ. ಆದರೆ ಕಲ್ಲೇ ಬೆಂಕಿ ಎಂದು ಬಾಯಿ

ಮಾತಿನಲ್ಲಿ ಹೇಳಿದರೆ ಹೇಗೆ ಬೆಂಕಿಯಾಗುವದಿಲ್ಲವೋ ಹಾಗೆ ಒರಿಯಮಾತಿನಲ್ಲಿ ನಾನು ಶಿವ (ಪರಬ್ರಹ್ಮ) ಎಂದು ಹೇಳಿದ ಮಾತ್ರಕ್ಕೆ ಬ್ರಹ್ಮತ್ವವು ಬರುವದಿಲ್ಲ.

ಪ್ರಮಾಣ

ಯೋಗಶಿಖಾ ಶ್ಲೋಕ ೫೪-೫೫

ಪ್ರವಿಚಾರ್ಯ ಚಿರಂ ಜ್ಞಾನಂ ಮುಕ್ತೋಽಹ ಮಿತಿಮನ್ಯತೇ
ಕಿಮಸೌ ಮನನಾದೇವ ಮುಕ್ತೋ ಭವತಿ ತತ್ ಕ್ಷಣಾತ್
ಪಶ್ಚಾಜ್ಜನ್ಮಾಂತರ ಶತೈರ್ಯೋಗಾದೇವ ವಿಮುಚ್ಯತೇ

ಭಾವಾರ್ಥ

ಬಹಳ ಕಾಲ ಜ್ಞಾನದ ಲಕ್ಷಣವನ್ನು ವಿಚಾರಮಾಡಿ ನಾನು ಮುಕ್ತನಾದೆನೆಂದು ತಿಳಿದರೆ ಹಾಗೆ ತಿಳಿದ ಮಾತ್ರದಿಂದ ಆ ಕೂಡಲೇ ಮುಕ್ತನಾಗುವನೇನು? ಆಮೇಲೆ ನೂರಾರು ಜನ್ಮಗಳನ್ನು ಎತ್ತಿ ಯೋಗ (ಮಹಾದೇವನೊಡನೆ ಸಮರಸವಾಗುವಿಕೆ) ದಿಂದಲೇ ಮುಕ್ತನಾಗುತ್ತಾನೆ.

ವಿಚಾರ

ಕಲ್ಲಿನೊಳಗಿರುವ ಬೆಂಕಿಯನ್ನು ತಿಕ್ಕುವಿಕೆಯಿಂದ ಹೇಗೆ ಹೊರಗೆ ತೆಗೆದು ಅದನ್ನು ಪ್ರಜ್ವಲವಾಗುವಂತೆ ಮಾಡಿ ಕಲ್ಲನ್ನೇ ಹೇಗೆ ಬೆಂಕಿಯಾಗಿ ಮಾಡಬಹುದೋ ಹಾಗೆ ಶಿವಕಲೆಯನ್ನು ದೀಕ್ಷೆಯಿಂದ ಹೊರಗೆ ತೆಗೆದು ಲಿಂಗಧಾರಣೆಮಾಡಿ ಸರ್ವಾಂಗಲಿಂಗಿಯಾದರೆ ಬ್ರಹ್ಮತ್ವವು ಸಿದ್ಧಿಸುತ್ತದೆ. ಇದೇ ಪೂರ್ಣಯೋಗವು.

---

೨೪. ಛೀ ಎಂದು ಧರೆ ಧನವ । ಛೀ ಎಂದು ಸತಿ ಸುತರ
ಛೀ ಎಂದು ದೇಹ—ಭೋಗಾಧಿಭೋಗಗಳ
ಛೀ ಎಂದು ಕಳೆಯಲವಬ್ರಹ್ಮ

ತಾತ್ಪರ್ಯ

ಭೂಮಿ ಮತ್ತು ದ್ರವ್ಯವನ್ನೂ, ಹೆಂಡಿರು ಮಕ್ಕಳನ್ನೂ, ದೇಹ ಭೋಗವೇ ಮೊದಲಾದ ಸಕಲಭೋಗಗಳನ್ನೂ ಛೀ ಎಂದು ಧಿಕ್ಕಾರ ಮಾಡಿ ಕಳೆದು ಬಿಡುವದಾದರೆ ಅವನು ಬ್ರಹ್ಮನು.

ಪ್ರಮಾಣ

ಮಹೋಪನಿಷತ್ ನಾಲ್ಕನೆಯ ಅಧ್ಯಾಯ ಶ್ಲೋಕ ೨೮

ನ ಧನಾನ್ಯುಪಕುರ್ವಂತಿ ನ ಮಿತ್ರಾಣಿ ನ ಬಾಂಧವಾಃ
ನ ಕಾಯಕ್ಲೇಶ ವೈಧುರ್ಯಂ ನ ತೀರ್ಥಾಯತನಾಶ್ರಯಃ

ಭಾವಾರ್ಥ

ಧನಗಳಾಗಲೀ ಮಿತ್ರರಾಗಲೀ ಬಾಂಧವರಾಗಲೀ ದೇಹದ ಶ್ರಮೆಯಾಗಲೀ ಜೊತೆಯಿಲ್ಲದಿರುವಿಕೆಯಾಗಲೀ ತೀರ್ಥ ದೇವಾಲಯುಗಳ ಆಶ್ರಯವಾಗಲಿ, ಉಪಕಾರಮಾಡುವುದಿಲ್ಲ.

ವಿಚಾರ

ವೈರಾಗ್ಯವನ್ನು ಹೊಂದಿದವನು ಬ್ರಹ್ಮನಾದೆನೆಂದು ತಿಳಿಯಬಹುದು. ಆದರೆ ಎಂತಹ ವೈರಾಗ್ಯವಿದ್ದರೂ ಉಣ್ಣುವುದು ಮೊದಲಾದ ವ್ಯವಹಾರವಿದ್ದೇ ಇರುತ್ತದೆ. ಈ ಒಣ ಬ್ರಹ್ಮಿಯು ದೇಹವನ್ನು ಬ್ರಹ್ಮವಾಗಿ ಮಾಡಿಕೊಂಡಿಲ್ಲವಾದ್ದರಿಂದ ಅವನ ದೇಹದ ಈ ವ್ಯವಹಾರವು ಬ್ರಹ್ಮನ ಕಾರ್ಯವಲ್ಲ. ಆದ್ದರಿಂದ ಅವನು ಬ್ರಹ್ಮನಾಗುವದಿಲ್ಲ. ಧರೆಧನ ಮೊದಲಾದವುಗಳನ್ನು ಛೀ ಎಂದು ಧಿಕ್ಕಾರಮಾಡುವದಾದರೆ ದೇಹ ಇಂದ್ರಿಯ ಕರಣಾದಿಗಳೆಲ್ಲವೂ ಶಿವಸ್ವರೂಪವಾಗಬೇಕು. ಆಗ ಶಿವನು ಭೋಗಿಸಿದ್ದನ್ನು ಉಪಭೋಗಮಾಡುವದರಿಂದ ಇವನು ಶಿವ (ಪರಬ್ರಹ್ಮ) ನೇ ಆಗಿರುತ್ತಾನೆ.

---

೭೫. ಛೀ ಎಂದು ಕಾಮುವನು । ಛೀ ಎಂದು ಕ್ರೋಧವನು
ಛೀ ಎಂದು ಲೋಭ—ಮೋಹ ಮದ ಮತ್ಸರವ
ಛೀ ಎಂದು ಕಳೆಯಲವಬ್ರಹ್ಮ

ತಾತ್ಪರ್ಯ

ಕಾಮು, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಛೀ ಎಂಬದಾಗಿ ಧಿಕ್ಕಾರಮಾಡಿ ಬಿಡುವುದಾದರೆ ಅವನು ಬ್ರಹ್ಮನು.

ಪ್ರಮಾಣ

ಮುದ್ಗಲೋಪನಿಷತ್ ೪ನೆಯ ಅಧ್ಯಾಯ

ಕಾಮ ಕ್ರೋಧ ಲೋಭ ಮೋಹ ಮದಮಾತ್ಸರ್ಯಮಿತ್ಯರಿ ಷಡ್ವರ್ಗಃ
................
ಕುಲಗೋತ್ರ ಜಾತಿವರ್ಣಾಶ್ರಮ ರೂಪಾಣಿ ಷಡ್ಭ್ರಮಾಃ
ಏತದ್ಯೋಗೇನ ಪರಮಪುರುಷೋ ಜೀವೋ ಭವತಿ ನಾನ್ಯಃ

ಭಾವಾರ್ಥ

ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು ಅರಿಷಡ್ವರ್ಗಗಳು, ................

ಕುಲ, ಗೋತ್ರ, ಜಾತಿ, ವರ್ಣ, ಆಶ್ರಮ, ರೂಪ ಇವು ಆರು ಭ್ರಮೆಗಳು. ಇವೇ ಮೊದಲಾದವುಗಳು ಕೂಡುವುದರಿಂದ ಪರಮ ಪುರುಷನಾದ ಪರಬ್ರಹ್ಮನು ಜೀವನಾಗುತ್ತಾನೆ ಜೀವನು ಬೇರೆ ಅಲ್ಲ.

ವಿಚಾರ

ತಾನೆಂಬುದು ಹೋಗಿ ಶಿವನೆಂಬುದು ನೆಲೆಗೊಂಡರೆ ತನು ಮನಗಳು ಲಿಂಗ ( ಬ್ರಹ್ಮ) ವಾಗುವದರಿಂದ, ಪೂರ್ವದಲ್ಲಿ ಅವುಗಳನ್ನು ಆಶ್ರಯಿಸಿದ್ದ ಕಾಮ ಕ್ರೋಧಾದಿಗಳು ಲೌಕಿಕರಂತೆ ಇರಲಿಕ್ಕೆ ಕಾರಣವೇ ಉಂಟಾಗುವದಿಲ್ಲ. .

---

೭೬. ಛೀ ಎಂದು ಪರಧನವ । ಛೀ ಎಂದು ಪರಸತಿಯ
ಛೀ ಎಂದು ಹಿಂಸೆ—ಪಾಪ ಪೈಶೂನ್ಯವನು
ಛೀ ಎಂದು ಕಳೆಯಲವಬ್ರಹ್ಮ

ತಾತ್ಪರ್ಯ

ಪರರ ದ್ರವ್ಯವನ್ನೂ ಪರರ ಹೆಂಡಿರನ್ನೂ ಪ್ರಾಣಿಹಿಂಸೆ, ಪಾಪಕಾರ್ಯ, ಕ್ಷುದ್ರ ( ಚಾಡಿ ) ಹೇಳುವಿಕೆ ಮೊದಲಾದವುಗಳನ್ನೂ ಛೀ ಎಂಬುದಾಗಿ ಧಿಕ್ಕಾರಮಾಡಿ ಬಿಡಲು ಅವನು ಬ್ರಹ್ಮನಾಗುತ್ತಾನೆ.

ಪ್ರಮಾಣ

ಜಾಬಾಲದರ್ಶನ ೬ನೆಯ ಖಂಡ ಶ್ಲೋಕ ೨೫

ತಸ್ಮಾತ್ ಸರ್ವಪ್ರಯತ್ನೇನ ಮುನೇ ಽ ಹಿಂಸಾದಿ ಸಾಧನೈಃ
ಆತ್ಮಾನಮಕ್ಷರಂ ಬ್ರಹ್ಮ ವಿದ್ಧಿ ಜ್ಞಾನಾತ್ತು ವೇಧನಾತ್

ಭಾವಾರ್ಥ

ಮುನಿಯೇ, ಎಲ್ಲಾ ಪ್ರಯತ್ನಗಳಿಂದಲೂ ಅಹಿಂಸೆಯೇ ಮೊದಲಾದ ಸಾಧನೆಗಳಿಂದಲೂ ಆತ್ಮನನ್ನು (ತನ್ನನ್ನು) ಜ್ಞಾನದಿಂದಲೂ ಸ್ಪರ್ಶ (ಮುಟ್ಟುವಿಕೆ) ದಿಂದಲೂ ಅಕ್ಷರ (ಓಂಕಾರ) ಬ್ರಹ್ಮರೂಪದಲ್ಲಿ ಎಂದರೆ ಲಿಂಗರೂಪದಲ್ಲಿ ತಿಳಿ. ( ಇಲ್ಲಿ ಪರಧನ ಪರಸತಿಗ್ರಹಣ ಮೊದಲಾದವುಗಳು ಹಿಂಸೆಯಲ್ಲಿಯೇ ಸೇರಿ ಬರುತ್ತನೆ ಎಂದು ತಿಳಿಯಬೇಕು) ವೇಧಾದೀಕ್ಷೆಮಾಡಿ ಓಂಕಾರರೂಪವೇ ಲಿಂಗವೆಂದು ಗುರುವು ಶಿಷ್ಯನಿಗೆ ಕೊಡುವುದರಿಂದ ಲಿಂಗವು ಅಕ್ಷರ ಬ್ರಹ್ಮನೆಂದು ತಿಳಿಯಬೇಕು.

ಈಶಾವಾಸ್ಯೋಪನಿಷತ್ತಿನ ಮೊದಲನೆಯ ಶ್ಲೋಕದಲ್ಲಿನ 'ಮಾಗೃಧಃ ಕಸ್ಯಸ್ವಿದ್ಧನಂ' ಎಂಬುದು ಪರದ್ರವ್ಯವನ್ನು ಗ್ರಹಿಸಬಾರದು ಎಂದು ಬೋಧಿಸುತ್ತದೆ.

## ವಿಚಾರ

ಒಣಮಾತಿನ ಬ್ರಹ್ಮಿಯಾದವನು ತಾನು (ಆತ್ಮನು) ಬ್ರಹ್ಮನೆಂದೂ ಉಳಿದವುಗಳು ಮಿಥ್ಯ (ಸುಳ್ಳು) ಎಂದೂ ಇತರರ ದ್ರವ್ಯ, ಇತರರ ಹೆಂಡಿರು ಇವುಗಳ ಉಪಭೋಗವನ್ನು ಹೊಂದಿದರೆ ಆತ್ಮನಿಗೆ ಬಾಧಕವಿಲ್ಲವೆಂದೂ ತಿಳಿದು ಅವುಗಳ ಉಪಭೋಗವನ್ನು ಹೊಂದುತ್ತಾನೆ. ಪ್ರಾಣಿಹಿಂಸೆಯನ್ನು ಮಾಡಿದರೂ ದೋಷವಿಲ್ಲವೆನ್ನುತ್ತಾನೆ. ಭಗವದ್ಗೀತೆಯಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ಶತ್ರುವಧೆಯಿಂದ ಆತ್ಮನಿಗೆ ದೋಷವಿಲ್ಲವೆಂಬ ಬೋಧೆಯನ್ನು ಮಾಡಿರುವುದು ಕಾಣುತ್ತದೆ. ಸುಳ್ಳು ಹೇಳುವುದೇ ಮೊದಲಾದ ಪಾಪಕಾರ್ಯಗಳೂ ಕೂಡಾ ತಾನು ಬ್ರಹ್ಮನಾದ್ದರಿಂದ ಆ ಬ್ರಹ್ಮನಿಂದ ಆದವುಗಳೆಂದೂ ತಿಳಿಯುತ್ತಾನೆ. ಮತ್ತು ಒಬ್ಬರು ಎದುರಿಗೆ ಇಲ್ಲದಾಗ ಅವರನ್ನು ನಿಂದಿಸುವುದರಿಂದ ಆಗುವ ಪೈಶೂನ್ಯ (ಚಾಡಿ) ವನ್ನು ಹೇಳಿದರೆ ತನ್ನ ತಪ್ಪಲ್ಲವೆಂದೂ ತಿಳಿಯುತ್ತಾನೆ. ಹೀಗಾದರೆ ಅವನು ಬ್ರಹ್ಮನಾಗುವದಿಲ್ಲ. ಇವುಗಳೆಲ್ಲವನ್ನೂ ಬಿಟ್ಟು ಬ್ರಹ್ಮನು ಭೂಮಿ ನೀರು ಮೊದಲಾದ ಬೇರೆ ಬೇರೆ ರೂಪಗಳನ್ನೂ ಗುಣಗಳನ್ನೂ ಹೊಂದಿರುವಂತೆ ಶಿವ ( ಬ್ರಹ್ಮ ) ನ ಸಾಕಾರ ರೂಪವು ನಾನಾವಿಧವಾಗಿರುವದೆಂದೂ ನಿರಾಕಾರದಲ್ಲಿ ಅವೆಲ್ಲವೂ ಒಂದೇ ಎಂದೂ ಭಾವಿಸಿ ವ್ಯವಹಾರವನ್ನು ಮಾಡಿದರೆ ತಾನು ಸಾಕಾರ ಬ್ರಹ್ಮದ ಒಂದು ರೂಪವೆಂದು ತಿಳಿದರೆ ಲೌಕಿಕ ವ್ಯವಹಾರವನ್ನು ನಿರ್ಲೇಪನಾಗಿ ಮಾಡಲಿಕ್ಕೆ ಅನುಕೂಲವಾಗುತ್ತದೆ. ಆಗ ಬ್ರಹ್ಮರೂಪಗಳಿಗೆ ಕಾರ್ಯಭೇದವಿರುವಂತೆ ಆಯಾಯಾ ಬ್ರಹ್ಮರೂಪದ ಕಾರ್ಯವನ್ನೇ ಮಾಡಬೇಕಾಗುತ್ತದೆ. ತಾನು ಸಾಕಾರ ಬ್ರಹ್ಮನಾದಾಗ ಸುಳ್ಳು ಹೇಳುವುದೇ ಮೊದಲಾದ ಕೆಟ್ಟ ಪದ್ಧತಿಗಳನ್ನು ಬಿಡಬೇಕಾಗುತ್ತದೆ. ಏಕೆಂದರೆ ಅದು ಜೀವಿಗಳಿಗೆ ಸಂಬಂಧಿಸಿದ ಕೆಲಸವಾಗಿ ಇರುತ್ತದೆ.

---

೭೭. ಸತ್ಯವುಳ್ಳವ ಬ್ರಹ್ಮ। ಸತ್ಯ ತಪಸಿಯೆ ಬ್ರಹ್ಮ
ಸತ್ಯ ಪಂಚೇಂದ್ರಿ—ಜಿತ ಬ್ರಹ್ಮ ಸರ್ವರೊಳು

ಮಿಥ್ಯವಳಿದಿರಲು ಅವ ಬ್ರಹ್ಮ
( ಇಂದ್ರಿಯ ಎಂಬುದರ ತದ್ಭವ ಪದ ಇಂದ್ರಿ )

ತಾತ್ಪರ್ಯ

ನಿಜವನ್ನು ಹೊಂದಿರುವವನೂ, ಸತ್ಯದ ತಪಸ್ಸಿನಲ್ಲಿ ಕೂಡಿ ಬೇರೆಯಾಗದೆ ಇರುವವನೂ, ಲೌಕಿಕರಂತೆ ಇರುವ ಪಂಚೇಂದ್ರಿಯಗಳನ್ನು ಜಯಿಸಿದವನಾಗಿ ಶಿವನ ಸಾಕಾರರೂಪಿನ ನಿಜೇಂದ್ರಿಯುಗಳುಳ್ಳವನೂ, ಲೋಕದ ಸಮಸ್ತವಸ್ತುಗಳೂ ಸುಳ್ಳೆಂಬ ಭಾವನೆಯನ್ನು ಕಳೆದುಕೊಂಡವನೂ ( ಬಿಟ್ಟ ಬಿಟ್ಟವನೂ ) ಆಗಿರಲು ಅವನು ಬ್ರಹ್ಮನಾಗುತ್ತಾನೆ.

ಸಾಕ್ಷಿ

ಸತ್ಯಂ ಬ್ರಹ್ಮಾ ತಪೋಬ್ರಹ್ಮಾ ಬ್ರಹ್ಮಾಚೇಂದ್ರಿಯ ನಿಗ್ರಹಃ
ಸರ್ವಜೀವ ದಯಾಬ್ರಹ್ಮಾ ಇತ್ಯೇತತ್ ಬ್ರಹ್ಮ ಲಕ್ಷಣಂ

ಭಾವಾರ್ಥ

ಸತ್ಯವು ಬ್ರಹ್ಮ, ತಪಸ್ಸು ಬ್ರಹ್ಮ, ಇಂದ್ರಿಯನಿಗ್ರಹವು ಬ್ರಹ್ಮ, ಸರ್ವಜೀವದಯೆಯು ಎಂದರೆ ಪ್ರಾಣಿಗಳ ಹಿಂಸೆ ಮಾಡದಿರುವಿಕೆಯು (ಅಹಿಂಸೆಯು) ಬ್ರಹ್ಮ, ಇದೇ ಬ್ರಹ್ಮ ಲಕ್ಷಣವು.

ವಿಚಾರ

ವಾಚಾಲಕನಾದ ಅದ್ವೈತಿಯು ಹೇಳುವಂತೆ ಸುಳ್ಳು ಹೇಳಿವರೂ ವಿಷಯಲೋಲುಪ (ಇಂದ್ರಿಯಸುಖಗಳಲ್ಲಿ ಕೂಡಿದವನು) ನಾಗಿ ಅನ್ಯಾಯ ವರ್ತನೆ ಮಾಡಿದರೂ ಅದು ಬ್ರಹ್ಮನ ಕಾರ್ಯವೆಂದು ತಿಳಿವುದು ಸರಿಯಲ್ಲ. ದೇಹ ಜಗತ್ತು ಮೊದಲಾದವುಗಳೆಲ್ಲಾ ಬ್ರಹ್ಮವೆಂದು ತಿಳಿದು ಆ ವರ್ತನದಲ್ಲಿ ನಡೆವುದು ಅವಶ್ಯಕ. ಒಬ್ಬನು ಒಂದು ಪದಾರ್ಥದ ರೂಪವನ್ನು ನೋಡಿದಾಗ ಒಂದು ಬ್ರಹ್ಮರೂಪಕ್ಕೂ ತಾನು (ಆತ್ಮನು) ಅದರ ರುಚಿಯನ್ನು ಹೊಂದಿದಾಗ ಒಂದು ಬ್ರಹ್ಮರೂಪಕ್ಕೂ ಅದರ ತೃಪ್ತಿಯನ್ನು ಹೊಂದಿದಾಗ ಒಂದು ಬ್ರಹ್ಮರೂಪಕ್ಕೂ ಅರ್ಪಿಸಿದೆನೆಂದು ತಿಳಿಯಬೇಕು. ಈ ವಿಧವಾಗಿ ಭಾವಿಸುವುದಾದರೆ ದೇವಾಲಯದಲ್ಲಿ ಮೂರ್ತಿಗೆ ರೂಪವನ್ನು ತೋರಿಸಿ ನೈವೇದ್ಯ ಮಾಡಿದುದು ಬ್ರಹ್ಮನ ಒಂದು ರೂಪಕ್ಕೆ ಒಂದು ಭಾಗವನ್ನು ಕೊಟ್ಟಂತೆ ಆಗುತ್ತದೆಯೇ ಹೊರತು ಪೂರ್ಣವಾಗಿ ಪೂರ್ಣಭಾಗವು ಪರಬ್ರಹ್ಮನಿಗೆ ಅರ್ಪಿಸಿದಂತೆ ಆಗುವುದಿಲ್ಲ. ಇದರಂತೆ ಸುಳ್ಳುಹೇಳಿ ಅದು ಬ್ರಹ್ಮನಿಗೆ ಎಂದು ಅರ್ಪಿಸಲಿಕ್ಕೆ ಬರುವುದಿಲ್ಲ. ಸತ್ಯವೇ

ಬ್ರಹ್ಮ ಲಕ್ಷಣ. ಸುಳ್ಳು, ಜೀವನ ಲಕ್ಷಣ. ಆದ್ದರಿಂದ ಜೀವನ ಪದಾರ್ಥವನ್ನು ಬ್ರಹ್ಮನಿಗೆ ಒಪ್ಪಿಸಲಿಕ್ಕೆ ಬರುವುದಿಲ್ಲ. ಹೀಗೆ ಈ ಪದ್ಧತಿಯು ಯೋಗ್ಯವಾದ ವ್ಯವಹಾರಕ್ಕೆ ಸರಿಯಾಗುತ್ತದೆ. ಈ ಬ್ರಹ್ಮನ ರೂಪಗಳಿಗೆ ಒಂದೊಂದು ಲಿಂಗವೆಂಬ ಹೆಸರಿನಿಂದ ಆಯಾಯಾ ಲಿಂಗಗಳಿಗೆ ಆಯಾಯಾ ಪದಾರ್ಥಗಳನ್ನು ಅರ್ಪಿಸುವುದು ವೀರಶೈವರಲ್ಲಿ ಪದ್ಧತಿಯಾಗಿದೆ. (ಈ ವಿಷಯವು ಲಿಂಗಾಂಗ ಸಮರಸದಲ್ಲಿ ಸ್ಪಷ್ಟವಾಗಿ ತೋರಿ ಬರುತ್ತದೆ. ಇನ್ನೊಂದು ಕಡೆಯಲ್ಲಿ ತೋರಿಬರಲಿಕ್ಕೆ ಅವಕಾಶವಿಲ್ಲ. ಹಾಗೆ ಅವಕಾಶವಿದ್ದರೆ ಆ ವಿಷಯವನ್ನು ಮಹನೀಯರು ತೋರಿಸಲಿ.)

---

೭೮. ಬ್ರಹ್ಮವೆನೆ ಪರಮಾತ್ಮ। ಬ್ರಹ್ಮವೆನೆ ಪರಶಿವನು
ಬ್ರಹ್ಮ ಶಬ್ದವದು—ಮೇಢ್ರಕ್ಕೆ ವರ್ತಿಸುವ
ಮರ್ಮ ನಿನಗಳ್ಕು ವಾಗ್ ಬ್ರಹ್ಮ

ತಾತ್ಪರ್ಯ

ಬರಿಯಮಾತಿನಿಂದ ದೊಡ್ಡವನಾದ ಬ್ರಹ್ಮಿಯೇ, ಬ್ರಹ್ಮ ಶಬ್ದಕ್ಕೆ ಪರಮಾತ್ಮ (ಶ್ರೇಷ್ಠನಾದ ಆತ್ಮನು) ಎಂತಲೂ, ಬ್ರಹ್ಮ ಶಬ್ದಕ್ಕೆ ಪರಶಿವ (ಕಾರಣಕ್ಕೆ ಕಾರಣನಾದ ಶಿವನು = ಲಿಂಗ) ಎಂತಲೂ, ಅರ್ಥವಾಗುತ್ತದೆ. ಆದರೆ ಬ್ರಹ್ಮಶಬ್ದಕ್ಕೆ ಶಿಶ್ನ ಅಥವಾ ಭಗ ಎಂತ ಅರ್ಥವಾಗುವ ರಹಸ್ಯವು ನಿನಗೆ ಆಗುತ್ತದೆ

ವಿಚಾರ

ತಾನು ಬ್ರಹ್ಮ ಎಂಬುವವನು ಬ್ರಹ್ಮ ಶಬ್ದಕ್ಕೆ ಸರಿಯಾದ ಅರ್ಥವನ್ನೂ ಲಕ್ಷಣವನ್ನೂ ತಿಳಿದು ಅದರಂತೆ ನಡೆಯದಿದ್ದರೆ ಅನರ್ಥವಾಗುತ್ತದೆ. ವಾಗದ್ವೈತಿಗಳು ಶಿಶ್ನ ಪರಾಯಣರಾಗಿ ಅನರ್ಥವನ್ನೇ ಹೊಂದುತ್ತಾರೆ.

---

೭೯. ರಾಜನೇ ಇಂದ್ರಂಗೆ। ರಾಜನೇ ಚಂದ್ರಂಗೆ
ರಾಜನೇ ಧರೆಯ—ನಾಳ್ವಂಗೆ 'ಗುಟಕ' (ಬುಟಕ?)ಂಗೆ ೧
ರಾಜನೆಂಬಂತೆ ವಾಗ್ ಬ್ರಹ್ಮ

೧ ರಜಕಂಗೆ ಎಂದೂ ಇದೆ

ತಾತ್ಪರ್ಯ

ರಾಜ ಎಂಬ ಶಬ್ದವು ಇಂದ್ರನಿಗೆ ಆಗುತ್ತದೆ. ಅದೇ ಶಬ್ದವು

ಚಂದ್ರನಿಗೆ ಆಗುತ್ತದೆ. ಅದೇ ಶಬ್ದವು ಭೂಮಿಯನ್ನು ಆಳುವ ರಾಜ ನಿಗೆ ಆಗುತ್ತದೆ. ಬೂಟಕನಿಗೆ (ವೇಷಧಾರಿಗೆ) ರಾಜ ಎಂಬಂತೆ ಅಥ ವಾ ಅಗಸನಿಗೆ ರಾಜ ( ರಜಕ ) ಎಂಬಂತೆ ಮಾತಿನಲ್ಲಿ ಬ್ರಹ್ಮನಾಗುವಿಕೆ ಯು ಇರುತ್ತದೆ.

ವಿಚಾರ

ಒಂದು ಶಬ್ದವು ಅದರ ಅರ್ಥಕ್ಕೆ ಅನುಸಾರವಾದ ಲಕ್ಷಣವುಳ್ಳ ವಾಗಿರಬೇಕು. ರಂಜನಾದ್ ರಾಜಃ ಎಂಬಂತೆ ಅರ್ಥವಾಗುವ ರಾಜ ಶಬ್ದವು ನಿಜವಾದ ರಾಜನಿಗಲ್ಲದೆ ವೇಷಧಾರಿಗೆ ನಿಜವಾಗಲರಿಯದು.

---

೭೦. ಗಜವೆನಲು ಆನೆಯು । ಗಜವೆನಲು ಅಮರೇಭ
ಅಜನೆನಲು ಬ್ರಹ್ಮ—ಆಜನಾಮ ಹೋತಿಂಗೆ
ಅಜನೆಂಬ ತೆರನೈ ವಾಗ್ ಬ್ರಹ್ಮ

ತಾತ್ಪರ್ಯ

ಗಜವೆಂದರೆ ಆನೆಯು, ಗಜವೆಂದರೆ ಐರಾವತವು (ಇಂದ್ರನ ಆನೆ ಯು.) ಹೀಗೆ ಅನೇಕಾರ್ಥ ಉಂಟು. ಅಜ ಎಂದರೆ ಬ್ರಹ್ಮ. ಉತ್ಪತ್ತಿ ಇಲ್ಲದವನು ಎಂಬ ಅರ್ಥದಲ್ಲಿಬ್ರಹ್ಮ ಎಂಬ ಹೆಸರು. ಇದೇ ಅಜ ಎಂಬ ಶಬ್ದವು ಹೋತು (ಆಡು) ಎಂದೂ ಅರ್ಥವನ್ನು ಕೊಡುತ್ತದೆ. ಮಾತಿ ನಲ್ಲಿ ನಾನು ಬ್ರಹ್ಮ ಎಂಬುದು ಆಡಿಗೆ ಬ್ರಹ್ಮ ಎಂಬಂತೆ.

---

೭೧. ಛಿ ಛೀ ಥೀ ತ್ರೈಮಲನೆ । ಛಿ ಛೀ ಥೀ ತ್ರೈಗುಣನೆ
ಛಿ ಛೀ ಥೀ ಪಂಚ—ವಿಷಯಾಷ್ಟ ತನುಗುಣನೆ
ಛಿ ಛೀ ಥೀ ನೀನು ಬ್ರಹ್ಮವೇ?

ತಾತ್ಪರ್ಯ

ಹೊರವೇಷದ ಬ್ರಹ್ಮಿಯೇ ಆಣವ, ಮಾಯೆ, ಕಾರ್ಮಿಕವೆಂಬ ಮೂರು ಮಲಗಳುಳ್ಳವನೇ, ಥೀ ಥೀ ಥೀ! ಸತ್ವ ರಜಸ್ಸು ತಮಗಳೆಂ ಬ ಮೂರುಗುಣಗಳುಳ್ಳವನೇ ಥೀ ಥೀ ಥೀ,! ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಐದು ವಿಷಯುಗಳುಳ್ಳವನೇ ಥೀ ಥೀ ಥೀ! ಭೂಮಿ, ನೀ ರು, ಬೆಂಕಿ, ಗಾಳಿ, ಬಯಲು ಸೂರ್ಯ ಚಂದ್ರ ಆತ್ಮ ಎಂಬ ಎಂಟು ತನುಗುಣಗಳುಳ್ಳವನೇ ಥೀ ಥೀ ಥೀ! ನೀನು ಬ್ರಹ್ಮವೇನು?

ಪ್ರಮಾಣ ೧

ಮೈತ್ರಾಯಣೀ ಉಪನಿಷತ್ ೩ನೆಯ ಪ್ರಪಾಠಕ ೩ನೆಯ ಪ್ರಕರಣ.

ಯಥಾಗ್ನಿನಾಯಃ ಪಿಂಡೋವಾಭಿಭೂತ: ಕರ್ತೃಭಿರ್ಹನ್ಯ ಮಾನೋ ನಾನಾತ್ವ ಮುಪೈತ್ಯೇವಂ ವಾವ ಖಲ್ವಸೌ ಭೂತಾತ್ಮಾ ಅಂತ: ಪುರುಷೇಣಾಭಿಭೂತೋ ಗುಣೈರ್ಹನ್ಯಮಾನೋ ನಾನಾತ್ವಮುಪೇತ್ಯಥ ಯತ್ತ್ರಿಗುಣಂ ಚತುರಶೀತಿ ಲಕ್ಷಯೋನಿ ಪರಿಣತಂ ಭೂತ ತ್ರಿಗುಣವೇತದ್ವೈ ನಾನಾತ್ವಸ್ಯರೂಪಂ

ಭಾವಾರ್ಥ

ಹೇಗೆ ಅಗ್ನಿಯಿಂದ ಕಬ್ಬಿಣದ ಗಟ್ಟಿಯು ವ್ಯಾಪಿಸಲ್ಪಟ್ಟಿಯ ಜಮಾನನಿಂದ ಹೊಡತಗಳನ್ನು ಹೊಂದಿ ಅನೇಕ ಪದಾರ್ಥ (ಕೊಡಲಿ ಕಂದಲಿ ಗುದ್ದಲಿ ಮುಂತಾದವು )ಗಳಾಗಿ ಆಗುತ್ತವೆಯೋ ಹಾಗೆ ಭೂತಾತ್ಮನು ಒಳಗಿನ ಆತ್ಮನಿಂದ ವ್ಯಾಪಿಸಲ್ಪಟ್ಟವನಾಗಿ ಗುಣಗಳಿಂದ ಹೊಡೆಯಲ್ಪಟ್ಟು ನಾನಾಜನ್ಮಗಳನ್ನು ಹೊಂದುತ್ತಾನೆ. ೮೪ ಲಕ್ಷ ಯೋನಿಗಳನ್ನು ಹೊಂದಿಸುವ ಈ ಭೌತಿಕ ತ್ರಿಗುಣವೇ ನಾನಾತ್ವ (ಅನೇಕ ಜನ್ಮಗಳು ) ಆಗುವ ರೂಪವಾಗಿ ಇರುತ್ತದೆ.

ಪ್ರಮಾಣ ೨

ಆತ್ಮ ಬೋಧ ಉಪನಿಷತ್ ಶ್ಲೋಕ ೧೭

ಬ್ರಹ್ಮಾನಂದೇ ನಿಮಗ್ನಸ್ಯ ವಿಷಯಾಶಾ ನ ತದ್ ಭವೇತ್
ವಿಷಂ ದೃಷ್ಟ್ವಾ ಮೃತಂ ದೃಷ್ಟ್ವಾ ವಿಷಂ ತ್ಯಜತಿ ಬುದ್ಧಿಮಾನ್

ಭಾವಾರ್ಥ

ಬ್ರಹ್ಮಾನಂದ ( ಬ್ರಹ್ಮವೇ ಸರ್ವವೂ ಎಂಬ ಅಭೇದಾನಂದ) ದಲ್ಲಿ ತುಂಬಿದವನಿಗೆ ವಿಷಯಗಳ ಆಶೆಯು ಉಂಟಾಗುವುದಿಲ್ಲ ಈ ಅಭೇದಾನಂದವೇ ಅಮೃತ. ವಿಷಯಗಳ ಆಶೆಯೇ ವಿಷ. ಬುದ್ಧಿವಂತನಾದವನು ವಿಷವನ್ನೂ ನೋಡಿ ಅಮೃತವನ್ನೂ ನೋಡಿ ವಿಷವನ್ನು ಬಿಟ್ಟುಬಿಡು (ತಿರಸ್ಕರಿಸು)ತ್ತಾನೆ.

ವಿಚಾರ

ಬ್ರಹ್ಮನ ವೇಷವನ್ನು ಹಾಕಿಕೊಂಡವ (ಮಾತಿನಲ್ಲಿ ತಾನು ಬ್ರಹ್ಮ ಎಂದು ಹೇಳುವವ) ನಲ್ಲಿ ಆತ್ಮನು ಮಾತ್ರ (ಅಥವಾ ಜೀವವು ಮಾತ್ರ) ಬ್ರಹ್ಮನೆಂಬ ತಿಳಿವಳಿಕೆ ಇರುತ್ತದೆ. ಅವನ ಪೂರ್ವಜನ್ಮದ ಮಲತ್ರಯಗಳು ನಿರ್ಮೂಲವಾಗಿಲ್ಲ, ಅವನ ಮನಸ್ಸಿನೊಳಗಿನ ಸತ್ವಾದಿ ಗುಣಗಳು ನಿರ್ಮೂಲವಾಗಿಲ್ಲ, ಅವನ ಜ್ಞಾನೇಂದ್ರಿಯ ವಿಷಯಗಳು ನಿರ್ಮೂ

ಲವಾಗಿಲ್ಲ, ಅವನ ತನುಗುಣಗಳು ನಿರ್ಮೂಲವಾಗಿಲ್ಲ, ಏಕೆಂದರೆ ಇವು ಗಳು ತಾನಲ್ಲ (ಆತ್ಮನಲ್ಲ) ಎಂದು ಆ ಅದ್ವೈತಿಯು ತಿಳಿದಿರುತ್ತಾನೆ ಇದಕ್ಕೆ ನೇತ್ಯಾತ್ಮಕ ಅದ್ವೈತವೆನ್ನುತ್ತಾರೆ. ಎಂದರೆ ನೇತಿ ನೇತಿ ಇಂ ದ್ರಿಯ ನಾನಲ್ಲ, ಕರಣ ನಾನಲ್ಲವೆಂದು ತಿಳಿಯುವಿಕೆ. ಆದ್ದರಿಂದ ಇವು ಸಂಸ್ಕಾರ ಹೊಂದದೆ ಹಾಗೆಯೇ ಉಳಿದಿರುತ್ತವೆ.

---

೮೨. ಛಿ ಛೀ ಥೀ ಭವಿಜನ್ಮಿ । ಛಿ ಛೀ ಥೀ ಭವಭಾರಿ
ಛಿ ಛೀ ಥೀ ವಾಗ—ದ್ವೈತಿ ಭೂತಪ್ರಾಣಿ
ಛಿ ಛೀ ಥೀ ನೀನು ಬ್ರಹ್ಮವೇ?

ತಾತ್ಪರ್ಯ

ಭವವುಳ್ಳವನೇ ಜನ್ಮವುಳ್ಳವನೇ ಮಾತಿನ ಅದ್ವೈತಿಯೇ, ಥೀ ಥೀ ಥೀ! ಮರಳಿ ಮರಳಿ ಹುಟ್ಟುವ ಭಾರವನ್ನು ಹೊತ್ತಿರುವವನೇ ಥೀ ಥೀ ಥೀ! ಪಂಚಭೂತಗಳಿಂದ ತುಂಬಿದ ಪ್ರಾಣವುಳ್ಳವನೇ (ಭೂತ ಪ್ರಾಣಿಯೇ) ಥೀ ಥೀ ಥೀ! ನೀನು ಬ್ರಹ್ಮನಾಗುವೆಯಾ?

ಪ್ರಮಾಣ ೧

ಮೈತ್ರಾಯಣಿ ಉಪನಿಷತ್—೩ನೆಯ ಪ್ರಪಾಠಕ ೨ನೆಯ ಪ್ರಕರಣ

ಅಸ್ತಿ ಖಲ್ವ ನ್ಯೋಽಪರೋ ಭೂತಾತ್ಮಾ ಯೋಽಯಂ।
ಸಿತಾಸಿತೈಃ ಕರ್ಮ ಫಲೈರಭಿಭೂಯಮಾನಃ ಸದಸದ್ಯೋನಿಮಾಪ
ದ್ಯ ಇತ್ಯವಾಚೀಂ ವೋರ್ಧ್ವಾಂಗತಿಂ ದ್ವಂದ್ವೈರಭಿಭೂಯಮಾ
ನಃ ಪರಿಭ್ರಮತೀತ್ಯಸ್ಯೋಪಾಖ್ಯಾನಂ

ಭಾವಾರ್ಥ

ಆತ್ಮನಿಗಿಂತ ಅನ್ಯನಾದ, ಶ್ರೇಷ್ಠನಲ್ಲದವನಾಗ ಭೂತಾತ್ಮನು ಇ ದ್ದಾನೆ. ಅವನು ಶುದ್ಧ ಮತ್ತು ಅಶುದ್ಧವಾದ ಕರ್ಮಗಳಿಂದ ಒಳ್ಳೆಯ ಅಥವಾ ಕೆಟ್ಟ ಸ್ಥಿತಿಯನ್ನು ಹೊಂದಿ ಮೇಲಿನ ಅಥವಾ ಕೆಳಗಿನ ಗತಿಯನ್ನು ಹೊಂದಿ ಹುಟ್ಟುವವನಾಗಿ (ಪುನಃ ಜನ್ಮಗಳನ್ನು ಹೊಂ ದಿ) ತಿರುಗುತ್ತಿರ.ತ್ತಾನೆ. ಇದೇ ಇವನ ಕಥೆ (ಹಾಡು).

(ಇಲ್ಲಿ ಭೂತಾತ್ಮ ಎಂಬುದೇ ಪದ್ಯದಲ್ಲಿ ಇರುವ ಭೂತಪ್ರಾಣಿ ಎಂಬುದ ಕ್ಕೆ ಸರಿಯಾದ ಪದ.)

ವಿಚಾರ

ಪಂಚಭೂತಗಳಿಂದಾದ ದೇಹವು ಸುಳ್ಳೆಂದು ಬಡಾಯಿ ಮಾತಿನ

ಬ್ರಹ್ಮಯು ತಿಳಿಯುವದರಿಂದ ಆವನ ದೇಹವು ಸಂಸ್ಕಾರವನ್ನು ಹೊಂದದೆ ಅವನು ಭೂತಾತ್ಮನಾಗಿರುವನು. ಈ ದೆಸೆಯಿಂದ ಅವನಿಗೆ ಜನ್ಮ ಮರಳಿ ಹುಟ್ಟುವಿಕೆ (ಭವ) ತಪ್ಪಿರುವದಿಲ್ಲ.

---

೮೩ ಹರ ಹರಾ। ಹರನೆತ್ತ | ನರಗುರಿಯು ತಾನೆತ್ತ।
ನರನೆತ್ತ ಹರನು—ಎಂದೆಂಬ ವಾಕ್ಯಕ್ಕೆ
ಒರೆದು ತೋರಿಹೆನು ದೃಷ್ಟವನು

ತಾತ್ಪರ್ಯ

ಶಿವ ಶಿವಾ ! ಭವ ಹರನಾದ ನಿರಾಕಾರ ಶಿವನು ಯಾವ ಕಡೆ? ಕುರಿ [ಪಶು] ಯಂತೆ ಇರುವ ಮನುಷ್ಯನಾದ ನೀನು ಯಾವ ಕಡೆ? ಮನುಷ್ಯನೆತ್ತ ಶಿವನೆತ್ತ ಎಂಬವಾಕ್ಯಕ್ಕೆ ದೃಷ್ಟಾಂತರವನ್ನು ಒರೆಹಚ್ಚಿ ತೋರಿಸುವೆನು! (ಮುಂದಿನ ಪದ್ಯಗಳಲ್ಲಿ ಇದರ ಉದಾಹರಣೆಗಳಿವೆ.) ಚ

ವಿಚಾರ

ಮನುಷ್ಯನು ತನ್ನಲ್ಲಿ ಸ್ವಲ್ಪಭಾಗವನ್ನಾದರೂ ಅದು ಉಂಟಾದ ಸ್ಥಿತಿಯಲ್ಲಿಯೇ ಬಿಟ್ಟಿದ್ದರೆ ಅವನು ಎಂದೆಂದಿಗೂ ಬ್ರಹ್ಮನಾಗುವದಿಲ್ಲ. ನರ, ಹರ, ಎಂದು ಭೇದ ಭಾವ ಉಂಟಾದಾಗ ನರನು ಎಂದಿಗೂ ಹರನಾಗುವುದಿಲ್ಲ. ಅದ್ವೈತಿಯು ಎಲ್ಲವೂ ಬ್ರಹ್ಮ ಎಂದು ಬಾಯಿಮಾತಿನಲ್ಲಿ ಹೇಳುವಂತೆ ಮನುಷ್ಯನು ತಾನು ಬ್ರಹ್ಮನೆಂಬ ಬರಿಯಜ್ಞಾನದಿಂದಲೇ ಬ್ರಹ್ಮನಾಗುವುದಿಲ್ಲ ಆದರೆ ತಕ್ಕ ಸಂಸ್ಕಾರದಿಂದ ಬ್ರಹ್ಮನಾಗುತ್ತಾನೆ

---

೮೪ ಹರನಿಂದ ಜನಿಸಿದಾ | ನರತಾನೆ ಹರನೆನಲು |
ನರನಿಂದ ಜನಿಸ—ಕ್ರಿಮಿಜಂತು ಕೀಟಕವು
ನರರೂಪವಾದಡಹುದೆಲವೊ

ತಾತ್ಪರ್ಯ.

ಪರಬ್ರಹ್ಮನಿಂದ ಹುಟ್ಟಿದ ಮನುಷ್ಯನು ತಾನಿದ್ದಂತೆ ಬ್ರಹ್ಮನೆಂದು ಹೇಳುವುದು ಮನುಷ್ಯನಿಂದ ಹುಟ್ಟುವ ಹೇನು ಕೂರೆ ಮೊದಲಾದವುಗಳನ್ನು ಮನುಷ್ಯನೇ ಎಂದು ತಿಳಿಯುವುದಾದರೆ ಅದರಷ್ಟು ನಿಜವು.

ವಿಚಾರ

ಬ್ರಹ್ಮರೂಪನೆಂದು ಮನುಷ್ಯನು ತನ್ನಿಷ್ಟಕ್ಕೆ ತಾನು ತಿಳಿದ ಮಾತ್ರಕ್ಕೆ ಬ್ರಹ್ಮನಾಗುವುದಿಲ್ಲ. ಮತ್ತು ಬ್ರಹ್ಮನಿಂದ ಮನುಷ್ಯನು

ಹುಟ್ಟಿದನು ಎಂದು ತಿಳಿದರೂ ಬ್ರಹ್ಮನಾಗುವದಿಲ್ಲ ಹೀಗೆ ತಿಳಿವುದರಿಂದ ಆಗುವ ಪದವು ಕೈವಲ್ಯ ಮೋಕ್ಷವಲ್ಲ. ಬ್ರಹ್ಮ ಎಂಬುವವನೊಬ್ಬನ್ನು ಜೇರೆಯಾಗಿದ್ದು ಈ ಭೂಮಿಯನ್ನಾಗಲೀ ಮನುಷ್ಯನನ್ನಾಗಲೀ ಹುಟ್ಟಿಸಿಲ್ಲ ನಿಜವಾಗಿ ಇಹದಲ್ಲಿಯೂ ಪರದಲ್ಲಿಯೂ ಮನುಷ್ಯಾದಿ ಭಾವನೆಯುಳ್ಳವನುತನ್ನ ಭಾವನೆಯಂತೆಯೇ ಆಗಿರುತ್ತಾನೆ. ಶಿವಭಾವನೆಯು ಬಂದು ಅದನ್ನು ಆಚರಿಸಿದರೆ ಶಿವ(God)ನೇ ಆಗುತ್ತಾನೆ. ಇಷ್ಟಲಿಂಗಾಂಗ ಸಮರಸದಿಂದಲ್ಲದೆ (ಬ್ರಹ್ಮಭಾವವು ತಕ್ಕ ಸಂಸ್ಕಾರದಿಂದ ಬಾರದೆ) ಮನುಷ್ಯಾದಿ ಪ್ರಾಣಿತ್ವದ ಬಿಡುಗಡೆ ಇಲ್ಲ.

---

೮೫ ಬಡಗಿ ಮಾಡಿದ ಬೊಂಬೆ | ಬಡಗಿ ತಾನಾದೊಡೇ
ಕಡಕೆ (ಕಡೆಗೆ) ಶಿವನಿಂದ—ಜನಿಸಿದಾ ಜಗತಾನು
ಉಡುಪತಿಯಧರನ ನಿಜವಹುಡು.

ತಾತ್ಪರ್ಯ

ಒಬ್ಬ ಬಡಿಗೆಯು ಮಾಡಿದ ಬೊಂಬೆಯು ತಾನಾಗಿ ಅದು ಬಡಗಿಯಾಗುವುದಾದರೆ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ, ಹೀಗೆ ಕಡೆಗೆ ಹುಟ್ಟಿದ ಭೂಮಿಯು ತಾನೇ ಶಿವನರೂಪವಾದ ನಿರಾಕಾರವೇ ಆದೀತು!

ವಿಚಾರ

ಅದ್ವೈತಿಯು ಜಗತ್ತು ಬ್ರಹ್ಮ ಎಂದು ಹೇಳಿದಮಾತ್ರಕ್ಕೆ ಜಗತ್ತು ಬ್ರಹ್ಮವಾಗುವುದಿಲ್ಲ. ಶಿವನು ಸೃಷ್ಟಿಸಿದ ಮಾಯೆಯಿಂದ ಜಗತ್ತು, ಮನುಷ್ಯ ಎಂಬಿವೇ ಮೊದಲಾದವು ಬೇರೆ ಬೇರೆಯಾಗಿ ತೋರುತ್ತವೆ. ಆಗ ಜಗತ್ತು ಶಿವನಾಗುವುದಿಲ್ಲ. ಇದಲ್ಲದೆ ಜಗತ್ತು ಜಡರೂಪವಾಗಿ ತೋರುತ್ತದೆ. ಆದುದರಿಂದ ಅದು ಪೂಜೆಗೆ ತಕ್ಕದ್ದಾಗಿಲ್ಲ. ಶಿವನು ಜ್ಞಾನಾನಂದ ರೂಪನು. ಆರೂಪವನ್ನು ಈ ಜಗತ್ತು ತೋರಿಸಲಾರದು.

ಸಾಂಖ್ಯ ಶಾಸ್ತ್ರವು ಪಿಂಡಾಂಡವನ್ನು ಜೀವಎಂತಲೂ ಜಗತ್ತನ್ನು ಈಶ್ವರ ಎಂತಲೂ ಎರಡೂ ಒಂದೇ ಎಂತಲೂ ಬೋಧಿಸುತ್ತದೆ. ಅದರ ನಿಷೇಧವು ಇಲ್ಲಿ ಮಾಡಲ್ಪಟ್ಟಿದೆ.

ಬಡಗಿಯು ಒಂದು ಬೊಂಬೆಯನ್ನು ತನಗಿಂತ ಭಿನ್ನವಾಗಿ ಮಾಡಿದಂತೆ ಶಿವನು ಈ ಜಗತ್ತನ್ನು ಮಾಡಿದನೆಂದು ಹೇಳಿದರೆ ಸಲ್ಲದು. ಬ

ಡಗಿ ಮಾಡಿದ ಬೊಂಬೆಯಲ್ಲಿ ಬಡಗಿ ಇಲ್ಲ, ಅದರಂತೆ ಶಿವನಿಂದ ಹುಟ್ಟಿದ ಜಗತ್ತಿನಲ್ಲಿ ಶಿವನಿಲ್ಲ. ಆದುದರಿಂದ ಶಿವನಿಂದ ಜಗತ್ತು ಹುಟ್ಟಿತೆಂಬುಹೇಳುವುದು ಸರಿಯಲ್ಲ. ಬ್ರಹ್ಮನಿಗೆ ಸಕಲ, ಸಕಲನಿಷ್ಕಲ, ನಿಷ್ಕಲ ಅಥವಾ ಸ್ಥೂಲ, ಸೂಕ್ಷ್ಮ, ಪರ ಎಂಬ ಮೂರು ರೂಪಗಳು ಇರುವವೆಂದು ಉಪನಿಷತ್ತುಗಳು ಒಪ್ಪುವಂತೆ ಜಗತ್ತು ಬ್ರಹ್ಮನ ಸಕಲ ಅಥವಾ ಸ್ಥೂಲರೂಪವು ಎಂದು ಭಾವಿಸಬೇಕು. ಹೀಗೆ ರೂಪ ಭಿನ್ನವಾಗುವುದರ ದೆಸೆಯಿಂದ ಕಾರ್ಯದಲ್ಲಿಯೂ ಭಿನ್ನತೆಯು ತೋರಿಬ್ರಹ್ಮನ ರೂಪಗಳಲ್ಲಿ ವ್ಯವಹಾರ ಮಾಡಲಿಕ್ಕೆ ಸಾಧ್ಯವಾಗುತ್ತದೆ. ನೀರು ಉಗಿಯಾಗುವುದಕ್ಕೆ ಉಷ್ಣದ ಸಂಸ್ಕಾರಬೇಕು. ಇವೆರಡೂ ಒಂದೇ ವಸ್ತುವಾದರೂ ಉಗಿಯಿಂದಾಗುವ ಕೆಲಸವೇ ಬೇರೆ. ಅದರಂತೆ ಸಾಕಾರ ಬ್ರಹ್ಮನಾದ ಮನುಷ್ಯನು ನಿರಾಕಾರ ಬ್ರಹ್ಮನಾಗುವುದಕ್ಕೆ ಕೆಲವು ಸಂಸ್ಕಾರಗಳು ಅವಶ್ಯಕ ಎಂಬ ಭಾವನೆಯಲ್ಲಿ ವ್ಯವಹಾರಮಾಡಿದರೆ ಆ ವ್ಯವಹಾರವು ಮನುಷ್ಯನ ವ್ಯವಹಾರದಂತೆ ಅಲ್ಲ. ಈ ದೆಸೆಯಿಂದಲೇ ಲಿಂಗಧಾರಣ ಲಿಂಗಪೂಜಾದಿ ಕಾರ್ಯಗಳು ಬ್ರಹ್ಮನ ಒಂದು ರೂಪವನ್ನು ಮತ್ತೊಂದು ರೂಪಕ್ಕೆ ತಿರುಗಿಸತಕ್ಕ ಸಂಸ್ಕಾರಗಳೇ ಹೊರತು ಲೌಕಿಕರು ಮಾಡುವ ಮೂರ್ತಿ ಪೂಜೆಯಂತೆ ಅಲ್ಲ.

---

೮೬ ಬಡಗಿ ಬೊಂಬೆಯಮಾಡಿ | ಬೆಡಗಿನಾ ಕೀಲಿಕ್ಕಿ
ಮಿಡಿಯೆ ಸೂತ್ರವನು—ನರ್ತಿಸುವ ಬೊಂಬೆಯೊಳು
ಬಡಗಿ ತಾನಿಹನೆ ಹೇಳೆಲವೊ?

ತಾತ್ಪರ್ಯ

ಬಡಗಿಯು ಬೊಂಬೆಯನ್ನು ಮಾಡಿ ಅದಕ್ಕೊಂದು ಬೆಡಗಿನ ಕೀಲನ್ನು ಇಟ್ಟು ಅದಕ್ಕೆ ಕಟ್ಟಿದ ಸೂತ್ರವನ್ನು ಎಳೆಯಲು ಕುಣಿಯುವಂಥಾ ಬೊಂಬೆಯಲ್ಲಿ ಬಡಗಿಯು ಇರುತ್ತಾನೇನು?

ವಿಚಾರ

ಪರಬ್ರಹ್ಮನು ದೇಹವನ್ನು ಮಾಡಿ ಅದರಲ್ಲಿ ವಿಚಿತ್ರವಾದ ಜೀವವನ್ನು ಇಟ್ಟು ಅಂತಃಕರಣಎಂಬಸೂತ್ರದಿಂದ ಎಳೆಯಲು ದೇಹವೆಲ್ಲಾ ಕುಣಿಯುವದು. ದೇಹವೇ ನಾನು ಎಂಬ ಭಾವನೆಯೇ ಅಂತಃಕರಣ. ಇಂತಹದೇಹದಲ್ಲಿ ಶಿವನು ಅಂತರ್ಯಾಮಿಯಾಗಿ ಮಾಯೆಯಮುಖಾಂತರ ಬಡಗಿಯಂತೆ ಸೂತ್ರಧಾರಿಯಾಗಿ ಇರುತ್ತಾನೆ. ಆದರೆ ದೀಕ್ಷೆಯಿಂ

ದ ದೇಹಸಂಸ್ಕಾರವನ್ನು ಮಾಡಿ ಲಿಂಗಧಾರಣೆ ಮಾಡಿದರೆ ದೇಹವು ಲಿಂಗವಾಗಿ ಆದರಲ್ಲಿ ಇರುವವುಗಳೆಲ್ಲಾ ಲಿಂಗವಾಗಲು ಅಂತಹವನು ಆಗ ಬ್ರಹ್ಮನೇ(ಲಿಂಗವೇ) ಆಗುತ್ತಾನೆ.

ಪ್ರಮಾಣ.

ಈ ಪ್ರಮಾಣವು ೮೪ರಿಂದ ೮೬ರವರೆಗಿನ ೩ಪದ್ಯ ಗಳಿಗೆ ಅನ್ವಯಿಸುತ್ತದೆ

ಸರ್ವ ಸಾರೋಪನಿಷತ್

ಅನಂತಂ ನಾಮ ಮೃದ್ವಿಕಾರೇಷು ಮೃದಿವ ಸ್ವರ್ಣವಿಕಾರೇಷು ಸ್ವರ್ಣಮಿವ ತಂತುವಿಕಾರೇಷು ತಂತುರಿವ ವ್ಯಕ್ತಾದಿ ಸೃಷ್ಟಿ ಪ್ರಪಂಚೇಷು ಪೂರ್ಣಂ ವ್ಯಾಪಕಂ ಚೈತನ್ಯಂ ಅನಂತಮಿತ್ಯುಚ್ಯತೇ

ಭಾವಾರ್ಥ

ಅನಂತ ಎಂದರೆ ಮಣ್ಣಾಗಿ ಮಾಡಲ್ಪಟ್ಟದ್ದರಲ್ಲಿ ಮಣ್ಣಿನಂತೆ, ಭಂಗಾರವಾಗಿ ಮಾಡಲ್ಪಟ್ಟದ್ದರಲ್ಲಿ ಭಂಗಾರದಂತೆ,ದಾರವಾಗಿಮಾಡಲ್ಪಟ್ಟದ್ದರಲ್ಲಿ ದಾರದಂತೆ ಹೀಗೆ ವ್ಯಕ್ತ(ಸ್ಪಷ್ಟ) ಲಕ್ಷಣವೇ ಮೊದಲಾದ ರೀತಿಗಳಲ್ಲಿ ಕಾಣುವಂತೆ ಇರುವ ವಸ್ತುಗಳಲ್ಲಿಯೂ ಸೃಷ್ಟಿ ಭೂಮಿ ಜಲಾದಿ ಐದುಭೂತಗಳಲ್ಲಿಯೂ ಪೂರ್ಣವ್ಯಾಪಕವಾದ ಚೈತನ್ಯವು.

ವಿಚಾರ

ಇಲ್ಲಿ ಚೇತನ ಅಚೇತನ ಎಂಬ ಎರಡು ಭಾವನೆಯಿಂದ ಮನುಷ್ಯನಲ್ಲಿಇರುವ ಆತ್ಮವು ಚೇತನವೆಂತಲೂ ಉಳಿದ ಇಂದ್ರಿಯ ಕರಣಾದಿಗಳು ಅಚೇತನವೆಂತಲೂ ವಿಂಗಡಿಸಿದ ನೇತ್ಯಾತ್ಮಕ ಅದ್ವೈತದಲ್ಲಿಯಾಗಲೀ ಮನುಷ್ಯನು ಅಶುದ್ಧ ಮಹಾದೇವನು ಅಂತರ್ಯಾಮಿ(ಶುದ್ಧನು) ಎಂಬ ದ್ವೈತದಲ್ಲಿಯಾಗಲೀ ಮನುಷ್ಯನೇ ಬೇರೆ ದೇವನೇ ಬೇರೆ ಎಂದು ವಿಂಗಡಿಸಲ್ಪಟ್ಟಾಗ ಆ ಮನುಷ್ಯನು ಎಂದೂ ದೇವನಾಗುವುದಿಲ್ಲ. ಮೇಲೆ ಪ್ರಮಾಣದಲ್ಲಿ ಹೇಳಿದಂತೆ ಮನುಷ್ಯನಾಗಿ ಮಾಡಲ್ಪಟ್ಟವನು ಮನುಷ್ಯನಾಗಿಯೇಇರುತ್ತಾನೆ, ಎಂಬುದನ್ನು ತೋರಿಸುವುದಕ್ಕೇನೇ ಈ ಮೂರೂ ಪದ್ಯಗಳಿವೆ. ಹೀಗೆ ತಿಳಿವಾಗ ಅನಂತ (ಅನೇಕ)ರೂಪಗಳಲ್ಲಿ ಈ ಜಗತ್ತು ತೋರುತ್ತದೆ. ಇವುಗಳಲ್ಲಿ ಪೂರ್ಣ ವ್ಯಾಪಿಯಾದ ಶಿವನು ಬೇರೆ ಇದ್ದಾನೆ ಎಂದು ದ್ವೈತದ ಅಭಿಪ್ರಾಯವು ತೋರುವಂತೆ ಆಗಿದೆ. ನಿರಾಕಾರ ಬ್ರಹ್ಮನಿಗೂ ಸಾಕಾರ ಮನುಷ್ಯನಿಗೂ ಭೇದವಿದೆ, ಎಂಬುದು ತೋರಿಸಲ್ಪಟ್ಟಿದೆ. ಕೆಲವು ಉಪನಿಷತ್ತುಗಳಲ್ಲಿ ಹೇಳಿದಂತೆ ಬ್ರಹ್ಮನಲ್ಲಿ ರೂಪಗಳನ್ನು ಮಾನಿಸದೆ ಇದ್ದರೆ ಈಪ್ರಾಪಂಚಿಕ ಭಿನ್ನತ್ವವು ತಪ್ಪು

ವುದೇ ಇಲ್ಲ

---

೮೭ ಅಷ್ಟತನು ಶಿವನೆ ನುತಿ | ಭ್ರಷ್ಟರಿರ, ನುಡಿಯದಿರಿ
ಸೃಷ್ಟಿ ಸ್ಥಿತಿ ಲಯವ—ನೆಯ್ದುವಾ ತತ್ವಕ್ಕೆ
ಶ್ರೇಷ್ಠತ್ವ ಉಂಟೆ? ಎಲೆ ಮರುಳೆ

ತಾತ್ಪರ್ಯ

ಬುದ್ಧಿಗೇಡಿಗಳಿರಾ, ಶಿವನು ಅಷ್ಟತನು ಎಂದರೆ ಭೂಮಿ, ನೀರು ಬೆಂಕಿ, ಗಾಳಿ, ಆಕಾಶ, ಸೂರ್ಯ, ಚಂದ್ರ, ಆತ್ಮ, ಎಂಬ ಎಂಟು ದೇಹಭಾಗಗಳು ಉಳ್ಳವನು ಎಂದು ಹೇಳುತ್ತೀರಿ. ಈ ಎಂಟು ತನುಗಳೂ ಉತ್ಪತ್ತಿಯಾಗುವಿಕೆ, ಇರುವಿಕೆ, ನಾಶವನ್ನು ಹೊಂದುವಿಕೆ ಎಂಬ ಮೂರು ಲಕ್ಷಣಗಳನ್ನು ಉಳ್ಳವುಗಳಾಗಿವೆ. ಇವು ತತ್ತ್ವಗಳು ಇವುಗಳಿಗೆ ಈ ತತ್ವಕ್ಕೆಶ್ರೇಷ್ಠತೆ ಇರುವುದೇನು?

ವಿಚಾರ

ಅನೇಕರು ತತ್ತ್ವ ಎಂದರೆ ಪರಬ್ರಹ್ಮ(ಶಿವ)ನೆಂದು ತಿಳಿದಿರುತ್ತಾರೆ. ಕೆಲವರು ಭೂಮಿ ಮೊದಲಾದವುಗಳು ತತ್ತ್ವಗಳೆಂದು ಹೇಳುತ್ತಾರೆ. ತತ್ತ್ವಎಂದರೆ ತತ್+ತ್ವಂ ಎಂಬ ಎರಡು ಪದಗಳು ಸೇರಿ ತತ್ತ್ವಂ ಎಂಬದಾಗಿ ಕೊನೆಯ ಸೊನ್ನೆಯನ್ನು ಬಿಟ್ಟು ತತ್ತ್ವ ಎಂಬ ಪದವಾಗಿದೆ. ಇದರ ಅರ್ಥವು 'ಆ ವಸ್ತುವು ನೀನು' ಎಂದಾಗುತ್ತದೆ. ಮೂಲವಸ್ತುವಿನಿಂದ ಆದ ರೂಪಗಳಿಗೆ ಆ ಮೂಲ ವಸ್ತುವೇ ನೀನು ಎಂದು ಹೇಳಬಹುದಾದ್ದರಿಂದ ತತ್ತ್ವವೆಂದರೆ ಒಂದು ಮೂಲವಸ್ತುವಿನ ತರುವಾಯ ಆದ ವಸ್ತುವೆಂದು ತಿಳಿಯಬೇಕು. ಆದ್ದರಿಂದ ತತ್ತ್ವಗಳು ತೋರಿ ಅಡಗತಕ್ಕವುಗಳಾಗಿವೆ ಕೇವಲ ನಿರಾಕಾರದ ಮೂಲವಸ್ತುವು ತತ್ತ್ವಾತೀತವಾಗಿರುತ್ತದೆ. ಆದ್ದರಿಂದ 'ಶಿವ' ಎಂಬಲ್ಲಿ ನಿರಾಕಾರದಮೂಲವಸ್ತುವು (ಕಾರಣ ಕಾರಣರೂಪನು) ಎಂದು ತಿಳಿಯಬೇಕೇ ಹೊರತು ಈ ಭೂಮಿ ಮೊದಲಾದ ರೂಪಗಳಲ್ಲಿ ಕಾಣುವ ವಸ್ತುವಿಗೆ 'ಶಿವ' ಎಂಬ ಹೆಸರು ಸಲ್ಲದು.

ಬ್ರಹ್ಮಾಂಡವು ಈಶ್ವರನೆಂದು ಸಾಂಖ್ಯಶಾಸ್ತ್ರವು ಹೇಳುತ್ತದೆ. ಆ ಈಶ್ವರನಿಗೆ ಅಷ್ಟತನುಗಳೆಂದು ಅದರಲ್ಲಿ ಬರೆದಿದೆ. ಈ ಎಂಟು ತನುಗಳುಕೂಡಿ ನಿರಾಕಾರ ಸ್ವರೂಪದ ಶಿವನನ್ನು ತೋರಿಸಲಾರವು. ಆದುದರಿಂದ ಇವುಗಳಿಗೆ ಶ್ರೇಷ್ಠತ್ವವಿಲ್ಲ. ಕೆಲವರು ಈ ಈಶ್ವರನಿಗೆ ಶಿವ ಎನ್ನುತ್ತಾರೆ

ಅದೂ ಸರಿಯಲ್ಲ.

೮೮ ಎಲ್ಲವುಂ ಶಿವನೆಂಬ | ಖುಲ್ಲವಚನವೆ ಪೊಲ್ಲ
ಎಲ್ಲವೂ ಶಿವನು—ತಾನಾಗೆ ನಿತ್ಯತ್ವ
ವಿಲ್ಲವವಕೇಕೆ ಎಲೆಮೂಢ

ತಾತ್ಪರ್ಯ

ಸರ್ವಾತ್ಮಕನಾದ ಅದ್ವೈತಿಯೇ? ಎಲ್ಲವೂ(ಪರಬ್ರಹ್ಮ= ನಿರಾಕಾರ ವಸ್ತು ] ಎಂಬ ನೀಚವಚನಗಳನ್ನು ಹೇಳುವುದಾದರೆ ಅದು ಸರಿಯಲ್ಲ. ಎಲ್ಲವೂ ನಿರಾಕಾರ ಶಿವನಾದರೆ ಅವಕ್ಕೆ ನಿತ್ಯತ್ವವು (ಯಾವಾಗಲೂ ಇರುವಿಕೆಯು ) ಏಕೆ ಇಲ್ಲ?

ವಿಚಾರ

ಭೂಮಿಯುಮೊದಲು ಕುದಿಯುವ ನೀರಿನರೂಪವಾಗಿದ್ದು ತಣ್ಣಗಾಗಿಕಡೆಗೆಗಟ್ಟಿಯಾಯಿತೆನ್ನುವರು. ಇಷ್ಟುಮತ್ತೆ ನೀರಾಗುವದೆನ್ನುವರು.ಹೀಗೆ ಭೂಮಿ ನೀರು ಮೊದಲಾದವುಗಳೆಲ್ಲವೂ ತಮ್ಮ ರೂಪವನ್ನು ಬದಲು ಮಾಡುವುದರಿಂದ ಈ ರೂಪಗಳು ಶಾಶ್ವತಗಳಲ್ಲ. ಆದ್ದರಿಂದ ಭೂಮಿ ಮೊದಲಾದ ಭೂತಗಳನ್ನೂ ಆತ್ಮ ಮೊದಲಾದ ತತ್ವಗಳನ್ನೂ ನಿತ್ಯನಾದ ನಿರಾಕಾರ ಶಿವನೆಂದು ತಿಳಿಯಬಾರದು ಇಲ್ಲಿ ಸರ್ವಂ ಖಲ್ವಿದಂ ಬ್ರಹ್ಮ ಎಂದು ಹೇಳುವ ಬಾಯಿಮಾತಿನ ಸರ್ವಾತ್ಮಕ ಅದ್ವೈತಿಯ ನಿಷೇಧವುಮಾಡಲ್ಪಟ್ಟಿದೆ. ಈ ಅದ್ವೈತಿಯು ಬ್ರಹ್ಮನು ನಿರಾಕಾರ ಎಂದು ಹೇಳುವುದರಿಂದ ಸರ್ವವೂ ನಿರಾಕಾರವು ಹೇಗೆ ಆಗುತ್ತದೆ? ಎಂಬ ಶಂಕೆಯೂ ತೋರಿಸಲ್ಪಟ್ಟಿದೆ. ಕೆಲವರು ಅದ್ವೈತಿಗಳು ಒಬ್ಬನೇ ಆದ ಜೀವನು(ವ್ಯಷ್ಟಿಯು)ಜೀವ ಎಂಬ ಹೆಸರು ಉಳ್ಳವನು ಎಂತಲೂ ಅನೇಕ ಜೀವರುಗಳು ಕೂಡಿದುದು [ಸಮಷ್ಟಿಯು] ಈಶ್ವರ ಎಂಬ ಹೆಸರು ಉಳ್ಳವನು ಎಂತಲೂ ಹೇಳುತ್ತಾರೆ ಅವರು ಈ ಈಶ್ವರನಿಗೆ 'ಶಿವ' ಎಂದೂ ತಿಳಿದಿರುತ್ತಾರೆ. ಇಂತಹತಿಳಿವಳಿಕೆಯು ಸರಿಯಲ್ಲ.ಎಲ್ಲವೂ ಬ್ರಹ್ಮ ಎಂದು ಹೇಳುವುದು ಬರಿಯ ಜ್ಞಾನವನ್ನು ಬೋಧಿಸುವುದರಿಂದ ಇಷ್ಟಕ್ಕೇನೇ ತಿಳಿಯತಕ್ಕದ್ದೆಲ್ಲವೂ ಆಯಿತೆಂದರೆ ಲೋಕದಲ್ಲಿ ವ್ಯವಹಾರವೇ ಸಾಗುವುದಿಲ್ಲ. ಈ ಜ್ಞಾನದ ಮುಂದೆ ತಿಳಿಯಬೇಕಾದ ಜ್ಞಾನ ಮತ್ತು ಆಚರಣೆಯು ಯಾವುದೆಂದರೆ ಆ ಸರ್ವಮಯ ಬ್ರಹ್ಮನಲ್ಲಿ ರೂಪಗಳನ್ನು ನಾನಿಸಬೇಕು ಹೀಗಾದರೆ ಒಂದೊಂದು ಬ್ರಹ್ಮವು ಒಂದೊಂದುಲಕ್ಷಣವುಳ್ಳದ್ದಾಗಿ ಇರುವುದರಿಂದ ವ್ಯವಹಾರಕ್ಕೆ ಯೋಗ್ಯವಾಗುತ್ತದೆ.

ಹಾಗಲ್ಲದೆ ಎಲ್ಲವೂ ಬ್ರಹ್ಮ (ನಿರ್ಗುಣವಸ್ತು) ಎಂದರೆ ಕತ್ತಿಯೂ ಕುದುರೆಯೂ ಒಂದೇ ಎಂಬ ಸಮಾಚಾರವು ಒದಗುತ್ತದೆ.

ಇದರಿಂದ ಶಿವ ಎಂದರೆ ನಿರಾಕಾರವಸ್ತು ಎಂಬುದನ್ನೂ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಜ್ಞಾನವಾದಮೇಲೆ ಮುಂದೆ ಇನ್ನೂ ತಿಳಿಯ ಬೇಕಾದ ಅಂಶಗಳಿರುವವೆಂಬುದನ್ನೂ ದೃಢವಾಗಿ ನಂಬಬೇಕಾಗಿದೆ.

---

೮೯ ಜಗದೊಳಗೆ ಶಿವನಿಲ್ಲ ಶಿವನೊಳಗೆ ಜಗವಿಲ್ಲ
ಜಗವು ಶಿವನಿಂದ—ಬೇರಿಲ್ಲ ತಿಳಿಯಲ್ಕೆ
ಅಘಹರನೆ ಬಲ್ಲನೀ ಬೆಡಗ

ತಾತ್ಪರ್ಯ

ಕಠಿಣ ರೂಪವನ್ನು ತಾಳಿದ ಭೂಮಿಯಲ್ಲಿ ನಿರಾಕಾರ ರೂಪನಾದ ಶಿವನು ಇಲ್ಲ. ನಿರಾಕಾರ ರೂಪನಾದ ಶಿವನಲ್ಲಿ ಕಠಿಣರೂಪದ ಭೂಮಿಯೂ ಇಲ್ಲ. ಆದರೆ ಜಗತ್ತು ಶಿವನನ್ನು ಬಿಟ್ಟು ಬೇರೆ ಇಲ್ಲ. ಯೋಚಿಸಿ ನೋಡುವುದಾದರೆ ಈ ಚಾತುರ್ಯವನ್ನು ಶಿವನೇ ಬಲ್ಲನು.

ವಿಚಾರ

ನಿರಾಕಾರನಾದ ಶಿವನು (ನಿರಾಕಾರವಾದ ಪರವಸ್ತುವು) ಸಾಕಾರವಾದ ಜಗದ್ರೂಪವನ್ನು ಪಡೆದು ಅನೇಕ ಬ್ರಹ್ಮಾಂಡಗಳ ರೂಪವಾಗಿ ತೋರುವನೆಂಬುದು ದೃಢವಾಗಿದೆ. ಆದಾಗ್ಯೂ ಈ ರೂಪಗಳನ್ನು ಹೇಗೆ ಪಡೆದನೆಂಬುದನ್ನು ಹೇಳಲಿಕ್ಕೆ ಶಿವನೇ ಬಲ್ಲನು. ಆಧುನಿಕ ಶಾಸ್ತ್ರಜ್ಞರೂ (Modern scientists) ಸಹಾ ಹೇಳಲಾರರು.

ಪ್ರಮಾಣ

ಶ್ವೇತಾಶ್ವತರೋಪನಿಷತ್ ಅಧ್ಯಾಯ ೧ ಶ್ಲೋಕ ೮–೧೨

ಸಂಯುಕ್ತಮೇತತ್ ಕ್ಷರಮಕ್ಷರಂ ಚ ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ
ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್ ಜ್ಞಾತ್ವಾ ದೇವಂ ಮುಚ್ಯತೇ ಸರ್ವ ಪಾಶೈಃ ||

ಜ್ಞಾಜ್ಞೌ ದ್ವಾವಜಾವೀಶಾನೀಶಾವಜಾಹ್ಯೇಕಾ ಭೋಕ್ತೃಭೋಗಾರ್ಥಯುಕ್ತಾ
ಅನಂತಶ್ಚಾತ್ಮಾ ವಿಶ್ವರೂಪೋಹ್ಯಕರ್ತಾ ತ್ರಯಂ ಯದಾ ವಿಂದತೇ ಬ್ರಹ್ಮಮೇತತ್

ಕ್ಷರಂಪ್ರಧಾನಮಮೃತಾ(ತೋ?)ಕ್ಷರಂಹರಃಕ್ಷರಾತ್ಮಾನಾವೀಶತೆ ದೇವ ಏಕಃ
ತಸ್ಯಾಭಿಧ್ಯಾನಾದ್ ಯೋಜನಾತ್ ತತ್ತ್ವಭಾವಾತ್ ಭೂಯಶ್ಚಾಂ
ತೇ ವಿಶ್ವಮಾಯಾ ನಿವೃತ್ತಿಃ||

ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ ಕ್ಷೀಣೈಃ ಕ್ಲೇಶೈಃ
ಸರ್ವ ಮೃತ್ಯು ಪ್ರಹಾಣಿಃ
ತಸ್ಯಾಭಿಧ್ಯಾನಾತ್ ತೃತೀಯಂ ದೇಹ ಭೇದೇ
ವಿಶ್ವೈಶ್ವರ್ಯಂ ಕೇವಲ ಆಪ್ತ ಕಾಮಃ
ಏತಜ್ಜ್ಞೇಯಂ ನಿತ್ಯಮೇವಾತ್ಮ ಸಂಸ್ಥಂ
ನಾತಃಪರಂ ವೇದಿತವ್ಯಂ ಹಿ ಕಿಂಚಿತ್
ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್ ||

ಭಾವಾರ್ಥ

ವ್ಯಕ್ತ (ತಿಳಿಯುವರೀತಿ) ಅವ್ಯಕ್ತ (ತಿಳಿಯದರೀತಿ) ಈ ಎರಡು ರೀತಿಗಳಿಂದ ಈಶ, ಅನೀಶರೆಂಬಿವರಿಬ್ಬರು ವಿಶ್ವವನ್ನು ವ್ಯಾಪಿಸಿಕೊಂಡಿದ್ದಾರೆ ಇವರಲ್ಲಿ ಅನೀಶನಾದ ಆತ್ಮ (ಜೀವ) ನು ಸುಖದುಃಖಗಳನ್ನು ಅನುಭವಿಸುವವನೆಂದು ತಿಳಿಯಲ್ಪಡುತ್ತಾನೆ. ಇವನು ದೇವನನ್ನು ತಿಳಿದು ಸಮಸ್ತ ಪಾಶಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ

ಜ್ಞ, ಅಜ್ಞ, ಎರಡೂ—ಅಥವಾ ಈಶ, ಅನೀಶ, ಎಂಬ—ಇವೆರಡೂ ಆಡು (ಪಶು)ಗಳು, ಇವರೊಳಗೊಂದು ಆಡಾದ ಭೋಗಿಸಬೇಕೆಂಬ ಅಭಿಪ್ರಾಯವುಳ್ಳವನಾಗಿ ಭೋಗಿಸುವವನಾದ ಆತ್ಮ (ಜೀವ)ನು ಅನಂತ (ಅನೇಕ) ರೂಪನಾಗಿಯೂ ವಿಶ್ವರೂಪನಾದ ಈಶನು ಅಕರ್ತಾ (ಯಾವುದನ್ನೂ ಮಾಡದೆ ಇರುವವನು) ಆಗಿಯೂ ಇರುತ್ತಾರೆ. ಆತ್ಮ (ಜೀವ)ನು ಮೂರನೆಯವನನ್ನು ಪಡೆಯಬೇಕು. ಈ ಮೂರನೆಯವನೇ ಬ್ರಹ್ಮ (ಅಥವಾ ಶಿವ)

ಇವರಲ್ಲಿ ಕ್ಷರ ಎಂಬುವವನು ಪ್ರಕೃತಿರೂಪನಾದ ಹರ(ಈಶ)ನು. ಅಕ್ಷರ ಎಂಬುವವನು ಅಮೃತರೂಪನಾದ ಆತ್ಮನು. ಈ ಕ್ಷರ (ಈಶ) ಮತ್ತು ಆತ್ಮ (ಅನೀಶ) ಇವರಿಬ್ಬರನ್ನೂ ಒಬ್ಬನೇ ದೇವನು ಆಳುತ್ತಾನೆ. ಈ ದೇವನ ಅಂತರ್ಧ್ಯಾನದಿಂದಲೂ ಕೂಡುವಿಕೆಯಿಂದಲೂ ಈದೇವನೇ ನೀನೆಂಬ ಅಥವಾ ನಾನೆಂಬ ಭಾವನೆಯಿಂದಲೂ ಹೀಗೆ ಅನೇಕ ಸಲದ ಅಭ್ಯಾಸದಿಂದ ಕೊನೆಯಲ್ಲಿ ವಿಶ್ವದ ಮಾಯೆಯು ನಿ

ವೃತ್ತಿಯಾಗುತ್ತದೆ.

ದೇವನನ್ನು ತಿಳಿದು ಸರ್ವಪಾಶವೂ (ಕ್ಲೇಶಗಳ ಗುಂಪು) ನಾಶವಾಗುತ್ತದೆ. ಕ್ಲೇಶಗಳು ನಾಶವಾಗಿ ಸರ್ವ ವೃತ್ತ್ಯಗಳ ಹಾನಿಯಾಗುತ್ತದೆ.

ಹೀಗೆ ಮೂರು ದೇಹಗಳಲ್ಲಿ ವಿಶ್ವದ ಐಶ್ವರ್ಯ ರೂಪನಾದ ದೇವನ ಅಂತರ್ಧ್ಯಾನ ಮಾಡುವುದರಿಂದ ಆತ್ಮನು ಕೇವಲ ಕೃತ ಕೃತ್ಯನಾಗುತ್ತಾನೆ. ಈ ದೇವನನ್ನು ಯಾವಾಗಲೂ ಆತ್ಮದಲ್ಲಿ ಇರುವವನೆಂದು ತಿಳಿಯಬೇಕು. ಇದಕ್ಕಿಂತಲೂಹೆಚ್ಚಿನದಾಗಿ ತಿಳಿಯತಕ್ಕ ಸಂಗತಿಏನೂ ಇಲ್ಲ ಭೋಗಿಸುವವನೂ ಭೋಗಿಸುವ ವಸ್ತುವೂ ಮತ್ತು ಭೋಗಿಸಲಿಕ್ಕೆ ಪ್ರೇರೇಪಿಸುವವನೂ ಇವನೇ ಎಂದು ತಿಳಿಯಬೇಕು. ಈ ಮೂರು ವಿಧದ ಮಾಟವೂ ಮೂರುವಿಧದ ಬ್ರಹ್ಮವೇ ಆಗಿದೆ. ಇಷ್ಟು ಆದರೆ ಎಲ್ಲವೂ ಹೇಳಲ್ಪಟ್ಟಂತಾಯಿತು.

ವಿಚಾರ

ಜಗದ್ರೂಪನಾದ ಈಶ್ವರ, ಜೀವ ರೂಪನಾದ ಆತ್ಮ ಇವರಿಬ್ಬರಿಗಿಂತಲೂ ಅನ್ಯನಾದ ಮೂರನೆಯವನಾದ ದೇವನನ್ನು ತಿಳಿಯಬೇಕು.

ಈ ದೇವನು ಆತ್ಮನಲ್ಲಿಯೇ ಇದ್ದಾನೆ ಎಂದೂ ತಿಳಿಯಬೇಕು. ಮೂರು ದೇಹಗಳಲ್ಲಿಯೂ ಈದೇವನನ್ನುಕೂಡಿಕೊಂಡ (ಅಭಿ) ಧ್ಯಾನಯೋಜನೆಯು (ಕೂಡಿರುವಭಾವವು)ಉಳ್ಳವನಾಗಬೇಕು. ನಿರಾಕಾರನಾದ ದೇವನನ್ನು ಶಕ್ತಿ ಯುಕ್ತನೆಂದು ಭಾವಿಸಿ ಅನುಷ್ಠಾನ ಮಾಡಬೇಕು. ಇಷ್ಟೆಲ್ಲಾ ಆಗುವುದು ಲಿಂಗಾಂಗ ಸಮರಸದಿಂದಲ್ಲದೆ ಬೇರೆವಿಧದಲ್ಲಿ ಸಾಧ್ಯವಿಲ್ಲ, ಮೂರು ತನು, ಮೂರು ಬ್ರಹ್ಮ (ಲಿಂಗ), ಸರ್ವವೂ ಬ್ರಹ್ಮ ಇಂತಹ ವಿಚಾರಗಳು ಶಿವಾದ್ವೈತಿಗಳಲ್ಲಿಯೇ ಆಚರಣೆಯಲ್ಲಿ ಬಂದಿರುತ್ತವೆ. ಶಿವಯೋಗ ಅಥವಾ ಪೂರ್ಣಯೋಗ ಇವುಗಳು ಇದೇ ಭಾವವನ್ನೇ ಬೋಧಿಸುತ್ತವೆ. ಈ ಬೋಧನೆಯಂತೆ ಆಚರಣೆಯಲ್ಲಿ ತಂದವನು ಮಹಾದೇವನೇ ಆಗುತ್ತಾನೆ.

ಜಗತ್ತು,( ಪಂಚಭೂತಗಳು ) ಮನುಷ್ಯ, ಪ್ರಾಣಿಗಳು, ಆತ್ಮ, ಬ್ರಹ್ಮ, ಶಿವ, ಇವರ ವಿಷಯಗಳನ್ನು ತಿಳಿಯುವುದು ಸಾಧ್ಯವಿಲ್ಲ, ಎಂಬುದು ಸಹಜವಾಗಿದ್ದರೂ ಪ್ರಯತ್ನದಿಂದ ಪೂರ್ವಿಕರು ತಿಳಿಯಲಿಕ್ಕೆ ಹೋದ ದಾರಿಯಲ್ಲಿ ಈಗಿನವರೂ ತಿಳಿಯಲು ಪ್ರವರ್ತಿಸಬೇಕು.

---

೯೦ ಕತ್ತಲೆಯು ಭಯುಕಂಜಿ । ಮತ್ತೆ ಜ್ಯೋತಿಯು ನೆನೆಯೆ
ಕತ್ತಲೆಯುು ಹರಿನು ದುಂಟೇನೋ? ವಾಗ್ಬ್ರಹ್ಮ
ಕೆತ್ತಣದು ಮುಕ್ತಿ ಮಾಣೆಲವೊ

ತಾತ್ಪರ್ಯ

ಕತ್ತಲೆಯಾಯಿತೆಂದು ಭಯಪಟ್ಟು ದೀಪವು ಬೇಕು ಎಂದು ಯೋಚಿಸಿದ ಮಾತ್ರಕ್ಕೆ ಕತ್ತಲೆಯುು ಹರಿದು ಹೋಗುವುದುಂಟೇ? ಮಾತಿನಲ್ಲಿ ನಾನು ಬ್ರಹ್ಮನಾದೆನೆಂದರೆ ಮೋಕ್ಷವು ಎತ್ತಣದು? ಎಲೋ ಬಿಡು ಬಿಡು.

ವಿಚಾರ

ದೀಪವು ಬೇಕೆಂದು ಯೋಚಿಸಿ ದೀಪವನ್ನು ಇಡುವ ಕೆಲಸವನ್ನು ಮಾಡಿದಾಗ ಕತ್ತಲೆಯುು ಹರಿದು ಹೋಗುವುದು. ಹಾಗೆಯೇ ನಾನು ಬ್ರಹ್ಮನಾಗಬೇಕೆಂದು ನೆನೆದು ಸಾಕಾರ ಬ್ರಹ್ಮರೂಪವಾದ ಲಿಂಗವನ್ನು ದೇಹಕ್ಕೆ ಮೊದಲು ಧರಿಸಿ ದೇಹವನ್ನು ಲಿಂಗರೂಪವ ಮಾಡಿ ಆ ಬಳಿಕ ಮನಸ್ಸನ್ನು ಅಂತಃಕರಣ ಮೊದಲಾದವುಗಳನ್ನು ಲಿಂಗಮಯವಾಗಿ ಮಾಡಿದಾಗ ತಾನು ಬ್ರಹ್ಮನಾಗುತ್ತಾನೆ.

ಪ್ರಮಾಣ

ಯೋಗಶಿಖೋಪನಿಷತ್ ೧ನೇ ಅಧ್ಯಾಯ ಶ್ಲೋಕ ೧೨-೧೩
ತಸ್ಮಾದ್ದೋಷ ವಿನಾಶಾರ್ಥಮುಪಾಯಂ ಕಥಯಾಮಿ ತೇ
ಜ್ಞಾನಂ ಕೇಚಿದ್ ವದಂತ್ಯತ್ರ ಕೇವಲಂ ತನ್ನ ಸಿದ್ಧಯೇ
ಯೋಗ ಹೀನಂ ಕಥಂ ಜ್ಞಾನಂ ಮೋಕ್ಷದಂ ಭವತೀಹ ಭೋ

................

ಅದೇ ಶ್ಲೋಕ ೨೨-೨೩
ಸುಖದುಃಖಾದಿ ಮೋಹೇಷು ಯಥಾ ಸಂಸಾರಿಣಾಂ ಸ್ಥಿತಿ:
ತಥಾ ಜ್ಞಾನೀ ಯದಾ ತಿಷ್ಠೇದ್ವಾಸನಾವಾಸಿತಸ್ತದಾ
ತಯೋರ್ನಾಸ್ತಿ ವಿಶೇಷೋತ್ರ ಸಮಾ ಸಂಸಾರ ಭಾವನಾ

ಭಾವಾರ್ಥ:- ಶಂಕರನು ಬ್ರಹ್ಮನಿಗೆ ಹೇಳುತ್ತಾನೆ.

ದೋಷವನ್ನು ಕಳೆಯುವುದಕ್ಕೆ ನಿನಗೆ ಉಪಾಯವನ್ನು ಹೇಳುತ್ತೇನೆ ಕೆಲವರು ಜ್ಞಾನವೇ ಉಪಾಯವೆಂದು ಹೇಳುತ್ತಾರೆ. ಅದರಿಂದ ಸಿದ್ಧಿಯಾಗುವುದಿಲ್ಲ. ಯೋಗವಿಲ್ಲದೆ ಬರಿಯ ಜ್ಞಾನವು ಹೇಗೆ ಮೋಕ್ಷವನ್ನು ಕೊಡುತ್ತದೆ?

......

ಸಂಸಾರಿಗಳು ಹೇಗೆ ಸುಖ ದುಃಖವೇ ಮೊದಲಾದವುಗಳ ಮೋಹದ ಲ್ಲಿ ಇರುವರೋ ಹಾಗೆ ಜ್ಞಾನಿಯೂ (ಸೋಹಂ ಶಿವೋಹಂ ಎನ್ನುವವನೂ) ವಾಸನೆಗಳಿಂದ ಕೂಡಿದವನಾಗಿದ್ದರೆ (ದೇಹ, ಮನಸ್ಸು, ಮೊದಲಾದವುಗಳ ಕಾರ್ಯಗಳನ್ನು ಯಥಾಸ್ಥಿತವಾಗಿ ಬಿಟ್ಟಿದ್ದರೆ) ಇಬ್ಬರಿಗೂ ಏನೂ ಭೇದವಿಲ್ಲ ಸಂಸಾರಭಾವನೆಯು ಇಬ್ಬರಿಗೂ ಒಂದೇಸಮನಾಗಿ ಇರುತ್ತದೆ.

## (ಹೀಗೆ ವಾಗದ್ವೈತ ಖಂಡನವಾದುದು.)

---

## ಶಿವಾದ್ವೈತ ಬೋಧೆ.

೯೧ ಗುರುಕರುಣವಂ ಪಡೆದು | ವರ ಲಿಂಗವನು ಭಜಿಸು
ಮರಣ ಭವ ಬಾಧೆ— ಪರಿದು ನಿಜಸುಖದೊಳಗ
ವಿರಳನೇ ಅಪ್ಪೆ ಎಲೆಮರುಳೆ

ತಾತ್ಪರ್ಯ: ಎಲೆ ಮರುಳನೇ ಗುರುವಿನ ದಯೆಯನ್ನು ಪಡೆದು ಅವನಿಂದ ಶ್ರೇಷ್ಠವಾದ ಲಿಂಗವನ್ನು ಪಡೆದು ಭಜಿಸು ಹಾಗೆ ಮಾಡಿದರೆ ಸಾವು, ಹುಟ್ಟುವಿಕೆ ಎಂಬ ಬಾಧೆಗಳೆಲ್ಲಾ ಕಳೆದು ನೀನು ನಿತ್ಯ ಸುಖದಲ್ಲಿ ಬೇರೆಯಾಗದವನಾಗಿಯೇ ಕೂಡಿರುವೆ.

ಪ್ರಮಾಣ:— ವೇದಾಂತ ಸಾರೋಪನಿಷತ್

ಯಶ್ಛಂದಸಾಮೃಷಭೋವಿಶ್ವರೂಪಃ ಛಂದೋಭ್ಯೋ ಅಧ್ಯಮೃತಾತ್ ಸಂಬಭೂವ | ಸ ಮೇಂಧ್ರೋ ಮೇಧಯಾ ಸ್ಪೃಣೋತು | ಅಮೃತಸ್ಯ ದೇವ ಧಾರಣೋಭೂಯಾಸಂ | ಶರೀರಂ ಮೇ ವಿಚರ್ಷಣಂ। ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಂ ಬ್ರಹ್ಮಣಃ ಕೋಶೋಸಿ ಮೇಧಯಾ ಪಿಹಿತಃ ಶ್ರುತಂ ಮೇ ಗೋಪಾಯ.....

ವಿಚಾರ: "ಮೋಕ್ಷಾರ್ಥಿಯಾಗಿ ಲಿಂಗರೂಪಿಯಾದ ಶಿವನನ್ನು ಸದಾ ಧರಿಸಬೇಕು. ಮತ್ತೂ ಅದು ಶರೀರದಿಂದ ಎಂದೂ ಅಗಲದಂತೆ ರಕ್ಷಿಸಲ್ಪಡಬೇಕು" ಎಂಬುದಾಗಿ ತಾತ್ಪರ್ಯವುಳ್ಳ ಶೃತಿಯಿದೆಂದು ಪೂರ್ವಿಕರು ಒಂದು ಪ್ರತಿಯಲ್ಲಿ ಬರೆದಿರುತ್ತಾರೆ (ಈ ವೇದಾಂತಸಾರ ಎಂಬ ಉಪನಿಷತ್ತು ಇನ್ನೂ ಮುದ್ರಣವಾಗಿಲ್ಲ. ಮೈಸೂರಿನ ಪ್ರಾಚ್ಯ ಕೋಶಾಲಯದಲ್ಲಿ ಬರಹದ ಪ್ರತಿ ಇರುತ್ತದೆ. )

ಶ್ವೇತಾಶ್ವತರೋಪನಿಷತ್ತಿನಲ್ಲಿ ಆತ್ಮನಿಗೆ ಅಮೃತ ಎಂಬ ಕರೆದಿರು.

ವುದು ೮೯ನೆಯ ಪದ್ಯದ ಪ್ರಮಾಣದಲ್ಲಿ ಗೊತ್ತಾಗಿದೆ. ಇಲ್ಲಿ 'ಅಸ್ಪೃತಸ್ಯ ದೇವಧಾರಣಂ' ಎಂಬುದರ ಅರ್ಥವು 'ಆತ್ಮನಿಗೆ ದೇವಧಾರಣವು ಅವಶ್ಯವು' ಎಂದು ಆಗುತ್ತದೆ. ಶಿವಶರಣರ ವಚನಗಳಲ್ಲಿ ಲಿಂಗಧಾರಣಕ್ಕೆ ದೇವಧಾರಣ ಎಂಬ ಸಾಂಕೇತಿಕ ಪದವನ್ನು ಉಪಯೋಗಿಸಿ ಇರುವುದರಿಂದ ಇಲ್ಲಿ'ದೇವಧಾರಣ'ಎಂಬ ಪದಕ್ಕೆ 'ಲಿಂಗಧಾರಣ' ಎಂದು ಅರ್ಥಮಾಡುವುದು ಸಮಂಜಸವಾಗಿದೆ. ಲಿಂಗಧಾರಣವು ಆರ್ಯರ ಕಾಲಕ್ಕಿಂತಲೂ ಮುಂಚೆ ಇತ್ತೆಂದು ಹರಪಮುಹಂಜೋದಾರೋ ಪಟ್ಟಣಗಳಲ್ಲಿ ಕಂಡ ದೃಷ್ಟಾಂತರಗಳಿಂದ ನಿರ್ಣಯಿಸಿ ಇರುವುದೂ ಇದಕ್ಕೆ ಸರಿಹೋಲುತ್ತದೆ.

ಲಿಂಗವನ್ನು ಧರಿಸಿ ಅದ್ವೈತವನ್ನು ಆಚರಿಸುವುದೇ ಶಿವಾದ್ವೈತವು ಇದೇ ಅದ್ವೈತ ಕ್ರಿಯೆಯೊಡನೆ ಕೂಡಿದ ಅದ್ವೈತ ಜ್ಞಾನವು. ಇದರಿಂದ ನಿಜಸುಖವು ಪ್ರಾಪ್ತವಾಗುತ್ತದೆ. ಆ ಸುಖವು ಆವಾಗಲೆ ತಪ್ಪುವುದಿಲ್ಲ.

ಪ್ರಮಾಣ:— ಲಿಂಗೋಪನಿಷತ್

................ಗುರೋರ್ಲಿಂಗಂ ................

ಭಾವಾರ್ಥ:—ಗುರುವಿನ ದಸೆಯಿಂದ ಲಿಂಗವನ್ನು ಪಡೆದು ಧರಿಸಬೇಕು.

---

೯೨ ತರುವಿಂಗೆ ನೀರೆರೆಯೆ | ತರುವಿನಿಂ ಫಲವಕ್ಕು
ವರ ಇಷ್ಟಲಿಂಗ--ವನು ಭಜಿಸೆ ಪ್ರಾಣಕ್ಕೆ
ಚಿರ ಪ್ರಾಣ ಲಿಂ-ದೊಳಗೆಲವೊ

ತಾತ್ಪರ್ಯ

ಮರಕ್ಕೆ ಬೇರಿನಲ್ಲಿ ನೀರೆರೆದರೆ ಬೇರೆ ಎಡೆಯಲ್ಲಿ ಹಣ್ಣನ್ನು ಕೊಡುತ್ತದೆ ಅದರಂತೆ ಶ್ರೇಷ್ಠವಾದ ಇಷ್ಟಲಿಂಗವನ್ನು ಪ್ರಾಣಕ್ಕೆ ಇಟ್ಟು ಸೇವಿಸಲು ಶಾಶ್ವತವಾಗಿ ಪ್ರಾಣವು ಲಿಂಗದೊಳಗೆ ಇರುವಿಕೆಯು ಉಂಟಾಗುತ್ತದೆ.

ವಿಚಾರ.

ದೇಹವು ಲಿಂಗವಾದರೆ ಒಳಗಿನ ಆತ್ಮನೂ ಲಿಂಗ. ದೇಹಕ್ಕೆ ಇಷ್ಟಲಿಂಗವಾದರೆ ಒಳಗಿನ ಪ್ರಾಣಕ್ಕೆ ಪ್ರಾಣಲಿಂಗ. ದೇಹವುಇಷ್ಟಲಿಂಗದ ಕ್ರಿಯೆಯುಳ್ಳದ್ದಾದರೆ ಪ್ರಾಣವು ಪ್ರಾಣಲಿಂಗದ ಕ್ರಿಯೆಯುಳ್ಳುದು ಹೀಗೆ ಕ್ರಿಯಾಜ್ಞಾನರೂಪವಾದ ಬ್ರಹ್ಮವು ಪ್ರಾಪ್ತವಾಗುತ್ತದೆ.

ಪ್ರಮಾಣ:— ಲಿಂಗೋಪನಿಷತ್

............ಇಷ್ಟಪ್ರಾಣ ಭಾವೇಷು ಲಿಂಗಧಾರಣಂ............

ಭಾವಾರ್ಥ:— ಸ್ಥೂಲದೇಹಕ್ಕೆ ಇಷ್ಟಲಿಂಗವನ್ನೂ ಸೂಕ್ಷ್ಮದೇಹ(ಪ್ರಾಣ)ಕ್ಕೆ ಪ್ರಾಣಲಿಂಗವನ್ನೂ ಕಾರಣದೇಹಕ್ಕೆ (ಆತ್ಮನಿಗೆ) ಭಾವಲಿಂಗವನ್ನೂ ಧಾರಣಮಾಡಬೇಕು. (ಈಉಪನಿಷತ್ತು ಮದ್ರಾಸ್ ಆದ್ಯರ್ ಪುಸ್ತಕಾಲಯದ ಪಂಡಿತರಿಂದ ಪ್ರಕಟಿಸಲ್ಪಟ್ಟಿದೆ.)

ಪ್ರಮಾಣ:— ಸದಾನಂದೋಪನಿಷತ್

ಆತ್ಮಾನಮರ್ಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ
ಧ್ಯಾನ ನಿರ್ಮಥನಾದೇವ ಪಾಶಂ ದಹತಿ ಮಾನವಃ
ಅಂತರ್ಬಹಿಶ್ಚ ತಲ್ಲಿಂಗಂ ವಿಧತ್ತೆ ಯಸ್ತು ಶಾಶ್ವತಂ

ಭಾವಾರ್ಥ

ತನ್ನನ್ನು ಕೆಳಗಿನ ಕಟ್ಟಿಗೆಯಾಗಿಯೂ ಪ್ರಣವಮಂತ್ರವನ್ನು ಮೇಲಿನ ಕಟ್ಟಿಗೆ (ಬನ್ನಿ ಮರ?) ಯಾಗಿಯೂ ಮಾಡಿ ಧ್ಯಾನದಿಂದ ಮಥನಮಾಡಿ (ಕಡೆದು) ಮನುಷ್ಯನು ತನಗೆ ಒದಗಿರುವ ಪಾಶವನ್ನು ಸುಡುತ್ತಾನೆ. ಹೀಗೆ ಮಥನಮಾಡುವುದರಿಂದ ಉಂಟಾದ ಲಿಂಗವನ್ನು (ಶಾಶ್ವತರೂಪವನ್ನು) ಆತನು ಹೊರಗೂ (ಸ್ಥೂಲದೇಹದಲ್ಲಿಯೂ) ಒಳಗೂ (ಸೂಕ್ಷ್ಮದೇಹ ಎಂದರೆ ಪ್ರಾಣದಲ್ಲಿಯೂ) ಕೂಡಾ ಧರಿಸುತ್ತಾನೆ.

ವಿಚಾರ

ದೇಹ (ಪ್ರಾಣಭಾವಗಳೊಡನೆ ಕೂಡಿದುದು), ಜಗತ್ತು, ಶಿವ, ಈ ಮೂವರ ರೂಪಗಳನ್ನು ಒಂದಾಗಿ ತೋರಿಸುವುದೇ ಇಷ್ಟಲಿಂಗವು. ಇದನ್ನು ದೇಹಕ್ಕೆ ಧಾರಣಮಾಡುವುದರಿಂದ ಪ್ರಾಣವೂ ಭಾವವೂ ಲಿಂಗ ಸ್ವರೂಪಗಳಾಗುತ್ತವೆ.

---

೯೩. ಎಳ್ಳಿಂಗೆ ಪರಿಮಳವ | ನೊಳ್ಳಿತಾಗಿಯೆ ಕಟ್ಟೆ
ಎಳ್ಳನೊಳಗೆಣ್ಣೆ—ಕಮ್ಮೆಣ್ಣೆಯಾದಂತೆ
ಎಳ್ಳಂಗ ಲಿಂಗ ಪರಿಮಳವು

ತಾತ್ಪರ್ಯ

ನಮಗೆ ಯಾವ ವಾಸನೆಯ ಎಳ್ಳೆಣ್ಣೆಯಾಗಬೇಕೆಂದು ಅಪೇಕ್ಷೆಯಾಗುವದೋ ಆವಾಸನೆಯ ವಸ್ತು (ಹೂ ಮೊದಲಾದವು) ಗಳನ್ನು ಎಳ್ಳಿಗೆ

ಕಟ್ಟಿದ್ದಾದರೆ ಆ ಎಳ್ಳಿನಿಂದ ಬರುವ ಎಣ್ಣೆಯು ಆ ಸುವಾಸನೆಯು ಎಣ್ಣೆಯಾದ ಹಾಗೆ. ಇಲ್ಲಿ ಎಳ್ಳು ಭಕ್ತನ ಅಂಗವಾಗಿರುವುದು. ಆದಕ್ಕೆ ಕಟ್ಟತಕ್ಕ ಪರಿಮಳವಸ್ತು ಲಿಂಗವಾಗಿರುವುದು. (ದೇಹದಮೇಲೆ ಕಟ್ಟಿದಲಿಂಗವು ಎಳ್ಳಿನಮೇಲೆ ಕಟ್ಟಿದ ಪರಿಮಳದಂತೆ ಒಳಗೆ ವ್ಯಾಪಿಸುವುದು)

ವಿಚಾರ

ಅಂಗವು ಲಿಂಗಸಂಗದಿಂದ ಲಿಂಗಾಂಗವಾಗುತ್ತದೆ.

ಪ್ರಮಾಣ

ಭಕ್ತಿಯೋಗೋಪನಿಷತ್.

ಪರಮಶಿವಲಿಂಗಾಂಗ ಸಾಮರಸ್ಯ ವಿವಿದಿಷೋರಿಯಂ ವ್ಯವಸ್ಥಾ ಸರ್ವ ವೇದಾಂತ ಸಿದ್ಧಾ|

(ಈ ಉಪನಿಷತ್ತು ಮೈಸೂರಿನಪ್ರಾಚ್ಯಕೋಶಾಲಯದ ಬರಹದಪ್ರತಿ)

ಭಾವಾರ್ಥ

ಶ್ರೇಷ್ಠವಾದ ಶಿವಲಿಂಗ ಮತ್ತು ಅಂಗ ಇವರಸಾಮರಸ್ಯವನ್ನು ತಿಳಿಯಬೇಕೆಂಬುವವರಿಗೆ ಈ ವ್ಯವಸ್ಥೆಯು ಸರ್ವವೇದಾಂತ ಸಿದ್ಧವಾಗಿ ಇರುತ್ತದೆ.

ಯೋಗಕುಂಡಲ್ಯುಪನಿಷತ್ ಶ್ಲೋಕ ೮೦

ಪಿಂಡ ಬ್ರಹ್ಮಾಂಡಯೋರೈಕ್ಯಂ ಲಿಂಗ ಸೂತ್ರಾತ್ಮನೋರಪಿ

ಭಾವಾರ್ಥ

ಪಿಂಡ ಮತ್ತು ಬ್ರಹ್ಮಾಂಡ ಇವರ ಐಕ್ಯವನ್ನೂ ಲಿಂಗ ಸೂತ್ರ ಮತ್ತು ಆತ್ಮ ಇವರ ಐಕ್ಯವನ್ನೂ ತಿಳಿಯಬೇಕು. (ಲಿಂಗಕ್ಕೆ ಸೂತ್ರ ಎಂಬ ಸಾಂಕೇತಿಕನಾಮವನ್ನು ಬ್ರಹ್ಮೋಪನಿಷತ್ ಪರಬ್ರಹ್ಮೋಪನಿಷತ್ ಮೊದಲಾದವುಗಳಲ್ಲಿಯೂ ಕೊಟ್ಟಿರುತ್ತಾರೆ ಅಂಗ ಎಂಬುದಕ್ಕೆ ಆತ್ಮವೆಂತಲೂ ಶಿವಶರಣರು ಕರೆದಿರುತ್ತಾರೆ ಆದ್ದರಿಂದ ಸೂತ್ರ ಮತ್ತು ಆತ್ಮ ಇವರ ಐಕ್ಯವು ಲಿಂಗ ಮತ್ತು ಅಂಗದ ಸಮರಸವೆಂದು ದೃಢವಾಗಿ ತಿಳಿಯಬೇಕು.)

---

೯೪ ಕಣ್ಣಿದ್ದು ಕಾಲಿಲ್ಲ| ಕಾಲಿದ್ದು ಕಣ್ಣಿಲ್ಲ
ಹಣ್ಣುಗಳು ಈರ್ವ—ರಿರುತಿರಲು ಮನೆ ಬೇಹು
ತಣ್ಣನೆಯ 'ಮಾಳ್ಪ ನೆಲೆಯಿಲ್ಲ' (ಮಾಳ್ಪುದಿಲ್ಲ)

ತಾತ್ಪರ್ಯ

ಕಣ್ಣಿದ್ದು ಕಾಲಿಲ್ಲದ ಅಣ್ಣನೊಬ್ಬನು, ಕಾಲಿದ್ದು ಕಣ್ಣಿಲ್ಲದ ಅಣ್ಣನೊಬ್ಬನು, ಹೀಗೆ ಇಬ್ಬರು ಇದ್ದಾಗ್ಯೂ ಮನೆಯು ಸುಡುತ್ತಿದ್ದರೆ ತಣ್ಣಗೆ ಮಾಡುವ ಸ್ಥಿತಿಯೇ ಇಲ್ಲ.

ಸಾಕ್ಷಿ

ನ ಕ್ರಿಯಯಾ ರಹಿತಂ ಜ್ಞಾನಂ ನ ಜ್ಞಾನ ರಹಿತಾ ಕ್ರಿಯಾ|
ನ ಪಶ್ಯನ್ನಂಧಕೋ ದಗ್ಧಂ ಪಶ್ಯನ್ ದಹತಿ ಪಂಗುಲಃ ||

ಭಾವಾರ್ಥ

ಕ್ರಿಯಾರಹಿತವಾದ ಜ್ಞಾನವು ಪ್ರಯೋಜನವಲ್ಲ. ಜ್ಞಾನ ರಹಿತವಾದ ಕ್ರಿಯೆಯು ಪ್ರಯೋಜನಕಾರಿಯಲ್ಲ ಕುರುಡನು ಸುಡುವುದನ್ನು ನೋಡುವುದಿಲ್ಲ. ಕುಂಟನು ನೋಡುತ್ತಿದ್ದರೂ ಸುಡುತ್ತಾನದೆ.

ವಿಚಾರ

ನಾನು ಬ್ರಹ್ಮನಾಗಿದ್ದೇನೆ ಎಂದು ನುಡಿದರೆ ಸಾಲದು, ನಡೆಯಲ್ಲಿಯೂ ಬ್ರಹ್ಮನಾಗಬೇಕು.

---

೯೫ ಕಣ್ಣಿಲ್ಲ ದ್ವೈತಿಗೇ ಕಾಲಿಲ್ಲದ್ವೈತಿಗೆ
ಕಣ್ಣುಕಾಲುಳ್ಳ—ಸ್ವಯದಂತೆ ಕ್ರಿ ಜ್ಞಾನ
ಸನ್ನಹಿತ ಭಕ್ತಿ ಶಿವಯೋಗ.

(ಇಲ್ಲಿ ಕ್ರಿ ಎಂಬ ಪದವು ಕ್ರಿಯೆ ಎಂಬ ಅರ್ಥದಲ್ಲಿ ಉಪಯೋಗವಾಗಿದೆ)

ತಾತ್ಪರ್ಯ

ಜೀವ ಬೇರೆ, ಬ್ರಹ್ಮ ಬೇರೆ ಎಂದು ಹೇಳುವ ದ್ವೈತಿ (ಭಿನ್ನ ವಾದಿ) ಗೆ ಕಣ್ಣಿಲ್ಲ (ಜ್ಞಾನವಿಲ್ಲ) ತಾನು ಬ್ರಹ್ಮನಿದ್ದೇನೆ ಎಂನು ಹೇಳುವ ಅದ್ವೈತಿ ( ಶುದ್ಧಾದ್ವೈತಿ )ಗೆ ಕಾಲಿಲ್ಲ (ನಡೆಯಿಲ್ಲ.) ಕಣ್ಣು ಕಾಲುಗಳುಳ್ಳ ಸ್ವತಂತ್ರನಡೆಯೇ ( ಕ್ರಿಯಾ ಜ್ಞಾನಗಳು ಕೂಡಿದಾಚರಣೆಯೇ )ಭಕ್ತಿಗೆ ಮೂಲವಾಗಿರುತ್ತದೆ. ಇದೇ ಶಿವಯೋಗವು.

ವಿಚಾರ

ಮಹಾದೇವನು ಪೂಜ್ಯನು ಅವನು ತನಗಿಂತ ಭಿನ್ನನು ಎಂಬುದಾಗಿ ಅನ್ಯಭಕ್ತಿಯ, ಕರ್ಮವನ್ನುಮಾಡುವವನಾದ ದ್ವೈತಿಗೆ ತಾನು ಮಹಾದೇವನೆಂಬ ಜ್ಞಾನವಿಲ್ಲದ್ದರಿಂದ ತನ್ನ ಮನುಷ್ಯತನವನ್ನು ಕಳೆದುಕೊಳ್ಳುವುದಿಲ್ಲ. ಮಾ

ತಿನ ಬ್ರಹ್ಮನು ತಾನು ಬ್ರಹ್ಮನೆಂದು ತಿಳಿದುಕೊಂಡು(ಜ್ಞಾನಿಯಾಗಿ) ಒಳಗೆ ಅನನ್ಯ ಭಕ್ತಿಯನ್ನು ತೋರಿಸಿದರೂ ಆದರಂತೆ ಬಾಹ್ಯದಲ್ಲಿನಡೆಯದೆ ಇರುವ್ಪ ದರಿಂದ ಬ್ರಹ್ಮನಾಗುವುದಿಲ್ಲ. ತಾನು ಬ್ರಹ್ಮನೆಂದು ತಿಳಿದು ಆದರಂತೆ ನಡೆ ವವನು ಸಹಜ ಭಕ್ತಿಯುಳ್ಳವನಾಗಿ ಒಳಗೂ ಹೊರಗೂ ಒಂದೇ ರೀತಿ ಇರುವುದರಿಂದ ಮನುಷ್ಯತ್ವವನ್ನು ಕಳೆದುಕೊಳ್ಳುತ್ತಾನೆ, ಇದೇ ಲಿಂಗಪೂಜೆಯಫಲ, ಇದೇ ಶಿವಯೋಗ.

ಸಾಕ್ಷಿ

ಅಂತಜ್ಞ್ಣಾನಂ ಬಹಿಃ ಕ್ರಿಯಾಮೇಕೀಭಾವಂ ನಪಶ್ಯತಿ|
ಅಷ್ಟವಿಂಶತಿ ಕೋಟ್ಯಾತು ನರಕೇ ಕಾಲಮಕ್ಷಯಂ ||
ಅಂತಜ್ಞ್ಣಾನಂ ಬಹಿ: ಕ್ರಿಯಾ ಚೈಕೀಭಾವೋ ವಿಶೇಷತಃ|
ಬಾಹ್ಯಾಂತರೈಕಾ ಗಿರಿಜೇ ಮುಕ್ತಿ: ಸ್ಯಾದುತ್ತಮೋತ್ತಮಾ||

ಭಾವಾರ್ಥ

ಒಳಗಿನ ಜ್ಞಾನವನ್ನೂ, ಹೊರಗಿನ ಕ್ರಿಯೆಯನ್ನೂ ಒಂದೇ ಸ್ಥಿತಿಯ ಲ್ಲಿ ನೋಡದಿದ್ದರೆ ೨೮ ಕೋಟಿ ನರಕದಲ್ಲಿ ಯಾವಾಗಲೂ ಕಾಲಕಳೆಯು ತ್ತಾನೆ. ಒಳಗಿನ ಜ್ಞಾನವನ್ನೂ ಹೊರಗಿನ ಕ್ರಿಯೆಯನ್ನೂ ಒಂದೇಸ್ಥಿತಿ ಯಲ್ಲಿ ಇರಿಸಿ ಒಳಹೊರಗುಗಳಲ್ಲಿ ಏನೂ ಉಳಿಯದಂತೆ ಒಂದೇ ಆದರೆ ಉತ್ತಮೋತ್ತಮ (ಅತ್ಯಂತ ಉತ್ತಮ)ವಾದ ಮುಕ್ತಿಯಾಗುತ್ತದೆ

---

೯೬ ಪ್ರಾಣಲಿಂಗವು ನಿನಗೆ ಕಾಣಬಾರದು ನೋಡ |
ಹೂಣಿರ್ದ ವಸ್ತು—ವನುತೆಗೆದು ಭೋಗಿಸುವ
ಜಾಣನಂತಾಗು ವಾಗ್ಬ್ರಹ್ಮ

ತಾತ್ಪರ್ಯ

ಒಣಮಾತಿನ ಬ್ರಹ್ಮಿಯೇ! ನಿನಗೆ ಪ್ರಾಣಲಿಂಗ (ಆತ್ಮಬ್ರಹ್ಮ)ವು ಕಾಣಬರುವುದಿಲ್ಲ ನೋಡಯ್ಯಾ, ಲೋಕದಲ್ಲಿ ಹೂಳಿದ್ದ ವಸ್ತು (ನಿಧಿನಿಕ್ಷೇಪ) ವನ್ನು ತೆಗೆದು ಭೋಗಿಸುವವನು ಜಾಣನು. ನೀನೂ ಅಂಥಾ ಜಾಣನಾಗು.

ಪ್ರಮಾಣ

ಮಹೋಪನಿಷತ್ ಅಧ್ಯಾಯ ೬ ಶ್ಲೋಕ ೧

ಸಂತ್ಯಜ್ಯ ಹೃದ್ಗುಹೇಶಾನಂ ದೇವಮನ್ಯಂ ಪ್ರಯಾಂತಿ ಯೇ

ತೇ ರತ್ನಮಭಿವಾಂಛಂತಿ ತ್ಯಕ್ತ ಹಸ್ತಸ್ಥ ಕೌಸ್ತುಭಾ:

ಭಾವಾರ್ಥ

ಹೃದಯದ ಗುಹೆಯಲ್ಲಿ ಇರುವ ದೇವನನ್ನು ಬಿಟ್ಟು ಅನ್ಯದೇವನನ್ನು ಕುರಿತು ಯಾರು ಹೋಗುತ್ತಾರೆಯೋ ಅವರು ತಮ್ಮ ಕೈಯಲ್ಲಿ ಇರುವ ಕೌಸ್ತುಭವೆಂಬ ದಿನಾಲೂ ಭಂಗಾರವನ್ನು ಕೊಡುತ್ತಿರುವ ರತ್ನವನ್ನು ಬಿಟ್ಟು ಉಳಿದ ರತ್ನಗಳನ್ನು ಅಪೇಕ್ಷಿಸಿದಂತೆ ಆಗುತ್ತದೆ.

ವಿಚಾರ

ಎಲ್ಲರ ಹೃದಯದಲ್ಲಿಯೂ ಪರಬ್ರಹ್ಮನಿದ್ದಾನೆ. ಅವನನ್ನೇ ಎಲ್ಲರೂ ದೇವನೆಂದು ಭಜಿಸಬೇಕು. ಹೀಗೆ ಹೃದಯದೊಳಗಿದ್ದ ಪ್ರಾಣದ ಸ್ವರೂಪವಾದ ಲಿಂಗ (ಬ್ರಹ್ಮ)ವನ್ನು ದೇಹದ ಸ್ವರೂಪವಾದ ಇಷ್ಟಲಿಂಗವಾಗಿ ಮಾಡಿ ಅದು ಸಕಲರೂಪವೆಂದು ತಿಳಿದು ಪೂಜಿಸುವವನಿಗೆ ಮಹಾದೇವನ ಅನುಭಾವದ ಜಾಣತನವುಂಟು.

---

೯೭ ಹರಿಯಜರು ಸುರಮುನಿಗಳ್ | ವರ ಇಷ್ಟಲಿಂಗವನು
ನೆರೆ ಭಜಿಸಿ ಮೋಕ್ಷ—ವನು ಪಡೆದು ಸುಖಿಸಲ್ಕೆ
ನರಗುರಿಯೆ ನಿನ್ನ ಪವಣೇನು?

ತಾತ್ಪರ್ಯ

ವಿಷ್ಣುವು, ಬ್ರಹ್ಮನು, ದೇವತೆಗಳು, ಮುನಿಗಳು, ಶ್ರೇಷ್ಠವಾದ ಇಷ್ಟಲಿಂಗವನ್ನು ಚನ್ನಾಗಿ ಭಜಿಸಿ ಮೋಕ್ಷವನ್ನು ಪಡೆದು ಸುಖಿಸಿರಲು ಮಾನವಪಶುವೇ, ನಿನ್ನ ಹಿರಿಯತನವೇನು?

ವಿಚಾರ

ಈ ಪ್ರಪಂಚವು ಯಾವುದರಲ್ಲಿ ನಾಶವಾಗಿ ಮತ್ತೆ ಯಾವುದರಲ್ಲಿ ಉತ್ಪತ್ತಿಯಾಗುವುದೋ ಅದೇ ಲಿಂಗವು, ಅದೇ ಪರಬ್ರಹ್ಮವು, ಇದನ್ನೇ ಒಂದಾನೊಂದು ಕಾಲದಲ್ಲಿ ಹಿಮಾಲಯದಲ್ಲಿದ್ದ ದೇವತೆಗಳೂ ಋಷಿಗಳೂ ಭಜಿಸಿದರು.

ಸಾಕ್ಷಿ

೧ ಏವಂ ದೇವಾಶ್ಚ ಗಂಧರ್ವಾ: ಸ ಯಕ್ಷೋರಗ ರಾಕ್ಷಸಾ:
ಪೂಜಯಂತಿ ಸದಾಕಾಲಮೀಶಾನಂ ಸುರನಾಯಕಂ
ಭವಾನೀ ಮೌಕ್ತಿಕಂ ಲಿಂಗಂ ನೀಲ ಲಿಂಗಂ ಹರಿ: ಸ್ವಯಂ

'ಶೈಲಕಂ ಪದ್ಮಸುಪ್ರಸ್ಟ' (ಪದ್ಮಸು ತ್ರಶೈಲಾಲಿಂಗಂ)
ವಜ್ರಲಿಂಗಂ ಸುರೇಶ್ವರ:
೨ ಉರ: ಸ್ಥಲೇ ಹರಿರ್ಲಿಂಗಂ ಧೃತ್ವಾ ಮೂರ್ಧ್ನಿ ಪಿತಾಮಹ:
ಲಿಂಗಂ ಸ್ವಕಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪತು:
೩ ಅಥಾಗಸ್ತ್ಯಾದಿ ಮುನಯೋ ದೂರ್ವಾಸೋ ನಂದಿಕೇಶ್ವರ:
ಮಹಾಕಾಳೋ ದಧೀಚಿಶ್ಚ ಪಾಣಿನಿಶ್ಚ ಕಣಾದಕ:
ಸ್ಕಂದೋ ಭೃಂಗಿರಿಟಿರ್ವೀರಭದ್ರಶ್ಚ ಪ್ರಮಥಾದಯಃ
ಅಜೋಹರಿಸ್ಸಹಸ್ರಾಕ್ಷ ಬಾಣಾಸುರ ದಶಾನನಾ
ವಸಿಷ್ಠ ರುರು ವಾಲ್ಮೀಕಿ ಭಾರದ್ವಾಜಾತ್ರಿ ಗೌತಮಾಃ
ಏತೇಪರಮ್ಮೈವಾಷ್ಟಭಜಂತಿ 'ಪರಮೇಶ್ವರಂ(ಪರಯಾಮುದಾ)
ಪ್ರಸಾದಸೇವನಾದ್ಧಾರಣಾದರ್ಚನಾದಪಿ|
ಜಾತಾ ದರ್ಶನ ಕರ್ತಾರ: ಶ್ರಾವಯಂತಿ ಜಗತ್ ತ್ರಯಂ||

ಭಾವಾರ್ಥ

೧ ದೇವತೆಗಳೂ ಗಂಧರ್ವರೂ ಯಕ್ಷರೂ ರಾಕ್ಷಸರೂ ದೇವತೆಗಳ ಒಡೆಯನಾದ ಈಶ್ವರನನ್ನು ದಿನಾಲೂ ಪೂಜಿಸುತ್ತಾರೆ. ಉದಾಹರಣೆ-ಪಾರ್ವತಿಯು ಮುತ್ತಿನಲಿಂಗವನ್ನೂ ವಿಷ್ಣುವು ನೀಲಲಿಂಗವನ್ನೂ ಬ್ರಹ್ಮನು ಶಿಲಾಲಿಂಗವನ್ನೂ ಇಂದ್ರನು ವಜ್ರಲಿಂಗವನ್ನೂ ಪೂಜಿಸುತ್ತಾರೆ.

೨ ವಿಷ್ಣುವು ಎದೆಯಮೇಲೂ, ಬ್ರಹ್ಮನು ಶಿರಸ್ಸಿನಲ್ಲಿಯೂ, ತಮ್ಮ ಲಿಂಗಗಳನ್ನು ಧರಿಸಿ ತಮ್ಮ ಪದವಿಗಳನ್ನು ಪಡೆದರು.

೩ ಅಗಸ್ತ್ಯನೇ ಮೊದಲಾದ ಖುಷಿಗಳು, ದೂರ್ವಾಸನು, ನಂದಿಕೇಶ್ವರನು, ಮಹಾಕಾಳನು, ದಧೀಚಿಯು, ಪಾಣಿನಿಯು, ಕಣಾದನು, ಷಣ್ಮುಖನು, ಭೃಂಗಿಯು, ವೀರಭದ್ರನೇ ಮೊದಲಾದ ಮಹನೀಯರು, ಬ್ರಹ್ಮನು, ವಿಷ್ಣುವು, ಬಾಣಾಸುರನು, ರಾವಣನು, ವಸಿಷ್ಠನು ರುರುವು, ವಾಲ್ಮೀಕಿಯು, ಭಾರದ್ವಾಜನು, ಅತ್ರಿಯು, ಗೌತಮನು, ಇವರೂ ಪರಮಶೈವರಾಗಿ 'ಪರಮೇಶ್ವರನನ್ನು' (ಬಹಳ ಪ್ರೀತಿಯಿಂದ) ಶಿವ ಪ್ರಸಾದ ಸೇವನೆ ಶಿವನಧ್ಯಾನ ಶಿವನ ಧಾರಣ ( ಲಿಂಗಧಾರಣ ) ಶಿವನ ಅರ್ಚನ, ಇವೇ ಮೊದಲಾದವುಗಳಿಂದ ಪಹಾ (ಭಜಿಸುತ್ತಾರೆ ಆ ದೆಸೆಯಿಂದ) ಇವರು ದರ್ಶನ( ಶಾಸ್ತ್ರ ) ಗ್ರಂಥಗಳನ್ನು ಮಾಡತಕ್ಕವರೂ ಜನರಿಗೆ ಕೇಳಿಸತಕ್ಕವರೂ ಆಗಿ ಇರುತ್ತಾರೆ.

ವಿಚಾರ

ಪೂರ್ವದಲ್ಲಿ ಮಹಾಶೈವ, ಯೋಗಶೈವ, ಜ್ಞಾನಶೈವ ಮೊದಲಾದವರು ಲಿಂಗವನ್ನು ಧರಿಸುತ್ತಿದ್ದರೆಂದೂ ಹೀಗೆ ಲಿಂಗಧಾರಿಗಳಾದವರಲ್ಲಿ ವೀರಶೈವ ಎಂಬ ಶ್ರೇಷ್ಠರೂ ಇದ್ದರೆಂದೂ ಪಾರಮೇಶ್ವರಾಗಮದ ೧೬ ನೆಯ ಪಟಲ ಮೊದಲಾದ ಕಡೆಗಳಲ್ಲಿ ಪ್ರಮಾಣವು ದೊರೆಯುತ್ತದೆ. ಶಿವನ ಲೋಕದಲ್ಲಿ ಇದ್ದ ಅನೇಕ ಪ್ರಮಥರು ವೀರಶೈವರಾಗಿದ್ದರು

ಮದರಾಸಿನಲ್ಲಿ ಆಡ್ಯರ್ ಪುಸ್ತಕಾಲಯದವರಿಂದ ಪ್ರಕಟವಾದ ಅಪ್ರಕಾಶಿತಾ ಉಪನಿಷದ: ಎಂಬ ಪುಸ್ತಕದಲ್ಲಿ ಇರುವ ಸಿದ್ಧಾಂತ ಶಿಖೋಪನಿಷತ್ ಎಂಬ ಉಪನಿಷತ್ತಿನಲ್ಲಿಯೂ ದೇವತೆಗಳು ಲಿಂಗವನ್ನು ಪೂಜಿಸುತ್ತಿದ್ದರು, ಎಂಬ ಪ್ರಮಾಣವು ದೊರಕುತ್ತದೆ.

---

೯೨ ಇಂತೆಂದು ಶಿವಯೋಗಿ | ಭ್ರಾಂತ ಜ್ಞಾನಿಗೆ ಪೇಳಿ
ಭ್ರಾಂತಳಿದು ಬ್ರಹ್ಮ—ದೊಳು ಬೆರೆವೆನೆಂದೆಂಬ
ಭ್ರಾಂತಿನಿಂ ಪೊಗಳ್ದ ಗುರುಪದವ

ತಾತ್ಪರ್ಯ

ಹೀಗೆ ಶಿವಯೋಗಿಯು ಭ್ರಾಂತಿ ಜ್ಞಾನಿ ( ಪ್ರಪಂಚವು ಮಿಥ್ಯೆ ಎಂಬ ಒಣಮಾತಿನ ಅದ್ವೈತಿ )ಗೆ ಹೇಳಲು ಅಂಥಾ ಭ್ರಾಂತಿಯನ್ನು ಕಳೆದು ಬ್ರಹ್ಮದಲ್ಲಿ ಕೂಡುವೆನೆಂದೆಂಬ ಭ್ರಾಂತಿ ( ಅದೊಂದೇ ಚಿಂತೆ ) ಯಿಂದ ಗುರುವಿನ ಪಾದಗಳ ಸ್ತೋತ್ರವನ್ನು ಮಾಡಿದನು.

ಪ್ರಮಾಣ

ಅಧ್ಯಾತ್ಮೋಪನಿಷತ್ ಶ್ಲೋಕ ೫೩-೫೪

ಜ್ಞಾನೋದಯಾತ್ ಪುರಾರಬ್ಧಂ ಕರ್ಮ ಜ್ಞಾನಾನ್ನ ನಶ್ಯತಿ
ಅದತ್ವಾ ಸ್ವಫಲಂ ಲಕ್ಷ್ಯಂ ಉದ್ದಿಶ್ಯೋತ್ಸೃಷ್ಟ ಬಾಣವತ್
ವ್ಯಾಘ್ರ ಬುದ್ಧ್ಯಾ ವಿನಿರ್ಮುಕ್ತೋ ಬಾಣಃ ಪಶ್ಚಾತ್ತು ಗೋ ಮತೌ
ನ ತಿಷ್ಠತಿ ಭಿನತ್ತ್ಯೇವ ಲಕ್ಷ್ಯಂ ವೇಗೇನ ನಿರ್ಭರಂ

ಭಾವಾರ್ಥ

ಜ್ಞಾನವು ( ಶಿವೋಹಂ ಎಂಬುದು ) ಉದಯವಾಗುವುದಕ್ಕಿಂತಲೂ

ಮುಂಚೆ ಆರಂಭಿಸಲ್ಪಟ್ಟ ನಾನು ನನಗಿಂತ ಅನ್ಯನಾದ ದೇವನನ್ನು ಆ ರಾಧಿಸುತ್ತೇನೆ ಎಂಬ ಕರ್ಮದ ಫಲವು ಜ್ಞಾನೋದಯವಾದರೂ ಅವ ಶ್ಯವಾಗಿ ಹೋಗುವುದಿಲ್ಲ. ತನ್ನ ಪ್ರಯೋಜನದ ಉದ್ದಿಶ್ಯದ ಕಡೆಗೆ ಲಕ್ಷ್ಯಕೊಡದೆ ಬಿಡಲ್ಪಟ್ಟ ಬಾಣದಹಾಗೆ ಒಬ್ಬನು ಹುಲಿ ಎಂದು ತಿಳಿ ದು ಅದನ್ನು ಹೊಡೆಯುವುದಕ್ಕೆ ಬಿಟ್ಟ ಬಾಣವು ಆ ಮೇಲೆ ಆದು ಹು ಲಿಯಲ್ಲ, ಆಕಳು, ಎಂದು ಜ್ಞಾನವಾದಮೇಲಾದರೂ ಆ ಬಾಣವು ಆಕ ಳನ್ನು ಹೊಡೆದೇತೀರುತ್ತದೆ. ಆದ್ದರಿಂದ ಗುರಿಯು ತನ್ನ ವೇಗದಿಂದ ತುಂಬಿಕೊಂಡಿರುತ್ತದೆ. ಅದರಂತೆ ನಾನು ಬ್ರಹ್ಮಚಾರಿ ಗೃಹಸ್ಥ ವಾನ ಪ್ರಸ್ಥ ಅಥವಾ ಸನ್ಯಾಸಿ ಎಂಬುದಾಗಿ ಒಬ್ಬನು ಆರಂಭಿಸಿದ ಕರ್ಮದ ಫ ಲವು ನಾನು ಮಹಾದೇವನು ಎಂದು ಜ್ಞಾನ ಮಾಡಿಕೊಂಡರೂ ತಪ್ಪು ವುದಿಲ್ಲ. ಇಂತಹ ಈ ಜ್ಞಾನವು ಭ್ರಾಂತಿ ಜ್ಞಾನವಾಗಿ ಪರಿಣಮಿಸುತ್ತದೆ.

ಅದೇ ಶ್ಲೋಕ ೫೭

ಪ್ರಾರಬ್ಧ ಕಲ್ಪನಾಪ್ಯಸ್ಯ ದೇಹಸ್ಯ ಭ್ರಾಂತಿರೇವಹಿ |

ಭಾವಾರ್ಥ

ಈ ದೇಹಕ್ಕೆ ಪ್ರಾರಬ್ಧವುಂಟೆಂದು (ತಂದೆ ತಾಯಿಗಳ ಮಲದಿಂದ ಬಂದಿತೆಂದು ಮೊದಲಾಗಿ) ಕಲ್ಪಿಸುವುದು ಭ್ರಾಂತಿಯು.

ವಿಚಾರ

ತಾನು ಬ್ರಹ್ಮನೇ ಎಂದು ತಿಳಿದು ಬ್ರಹ್ಮಸ್ಥಿತಿಯನ್ನು ಹೊಂ ದಬೇಕು. ಜ್ಞಾನದಲ್ಲಿ ಬ್ರಹ್ಮನಾಗಿ ನಡೆಯಲ್ಲಿ ಮನುಷ್ಯನಾಗಬಾರದು. ಜ್ಞಾನಮಾತ್ರದಿಂದ ಹೇಗೆ ನಡೆದರೂ ಅಡ್ಡಿಯಿಲ್ಲ ಎಂದು ತಿಳಿಯಬಾರದು.

ಜ್ಞಾನಕ್ಕೂ ನಡೆಗೂ ಹೋಲಿಕೆ ಇರಬೇಕು. ೯೫ನೇ ಪದ್ಯದ ಸಾ ಕ್ಷಿ ಶ್ಲೋಕದಲ್ಲಿ ಈ ವಿಚಾರವು ಚನ್ನಾಗಿ ಹೇಳಲ್ಪಟ್ಟಿರುತ್ತದೆ. ಹರಟೆಯ ಅದ್ವೈತಿಯು ಬ್ರಾಹ್ಮಣ ಮೊದಲಾದ ಜಾತಿಗಳ ಕರ್ಮಗಳನ್ನಿಟ್ಟುಕೊಂ ಡು ಅವು ಏನಾದರೇನು? ಎಲ್ಲವೂ ಸುಳ್ಳು, ನಾನು ಶಿವನಾದೆನು ಎನ್ನುವುದಾ ದರೆ ಅವನಿಗೆ ಎಂದಿಗೂ ಶಿವತ್ವ ಸಿದ್ಧಿಯಾಗಲಾರದು. ಇಂತಹ ಭ್ರಾಂತಿ ಯನ್ನು ಬಿಟ್ಟು ಬ್ರಹ್ಮದಲ್ಲಿ ಕೂಡುವ ವಿಚಾರವೇ ಶಿವಾದ್ವೈತವು.

---

 ಎನ್ನ ಅವಗುಣ ಕೋಟಿ । ನಿನ್ನ ಕ್ಷಮೆ ಶತಕೋಟಿ

ಎನ್ನ ಅವಗುಣವ—ನೋಡದಲೆ ಸಲಹೆಂದು
ಸನ್ನುತಿಯ ಗೆಯ್ದ ಗುರುಪದವ

ತಾತ್ಪರ್ಯ

'ಗುರುವೇ, ನನ್ನ ಕೆಟ್ಟಗುಣಗಳು ಕೋಟಿ ಇರುತ್ತವೆ. ನಿನ್ನಲ್ಲಿರುವ ಕ್ಷಮೆಯು ನೂರು ಕೋಟಿ ಇರುತ್ತದೆ. ನನ್ನ ಕೆಟ್ಟ ಗುಣವನ್ನು ನೋಡದೆ ಕಾಪಾಡ.' ಎಂಬುದಾಗಿ ಗುರುವಿನ ಪಾದಗಳನ್ನು ಚನ್ನಾಗಿ ಸ್ತುತಿಸಿದನು.

ವಿಚಾರ

ಪ್ರಾಪಂಚಿಕದ ಬಿಡುಗಡೆಯನ್ನು ಹೊಂದಬೇಕೆನ್ನುವವನು ಯೋಗ್ಯನಾದ ಗುರುವನ್ನು ಹೊಂದಿ ಪ್ರಾರ್ಥಿಸಿಕೊಳ್ಳಬೇಕು.

---

೧೮೦ ಗುರುವೆ ಪರಮಾನಂದ । ಗುರುವೆ ಮುಕ್ತ್ಯಾನಂದ
ಗುರುವೆ ಅಜ್ಞಾನ—ತಿಮಿರ ಹರ ಭಾಸ್ಕರನೆ
ಶರಣು ಶರಣೆಂದು ನುತಿಸಿದನು.

ತಾತ್ಪರ್ಯ

ಶ್ರೇಷ್ಠನಾದ ಆನಂದ ಸ್ವರೂಪನಾದ ಗುರುವೇ, ಮೋಕ್ಷದ ಆನಂದ ರೂಪನಾದ ಗುರುವೇ, ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವ ಸೂರ್ಯನಂತೆ ಇರುವವನೇ, ನಿನ್ನನ್ನು ಮೊರೆಹೊಕ್ಕೆನು. (ನೀನಲ್ಲದೆ ನನಗೆ ಅನ್ಯರು ರಕ್ಷಕರಿಲ್ಲ) ಎಂದು ಹೊಗಳಿದನು.

---

೧೮೧ ಹರಮುನಿಯೆ ಗುರುಕಾಯ್ವ । ಗುರುಮುನಿಯೆ ಹರಕಾಯ
ಹರನಿಗಿಂದಧಿಕ—ಗುರುವೆಂದು ಗುರುವಿನಿಂ
ಪರವಿಲ್ಲವೆಂದು ನುತಿಸಿದನು.

ತಾತ್ಪರ್ಯ

" ಶಿವನು ಕೋಪಗೊಳ್ಳಲು ಗುರುವು ಕಾಯುತ್ತಾನೆ. ಗುರುವು ಕೋಪಗೊಳ್ಳಲು ಶಿವನು ರಕ್ಷಿಸುವುದಿಲ್ಲ. ಆದ್ದರಿಂದ ಶಿವನಿಗಿಂತ ಅಧಿಕನು ಗುರುವಲ್ಲವೇ? ಗುರುವಿಗಿಂತ ಶ್ರೇಷ್ಠನಿಲ್ಲ. " ಎಂಬುದಾಗಿ ಹೊಗಳಿದನು.

ವಿಚಾರ

ನಾಲ್ಕು ವೇದಗಳ ಧರ್ಮವನ್ನು ಅನುಸರಿಸಿಕೊಂಡು ಹೋಗುವ

ಪ್ರತಿಯೊಬ್ಬನೂ ಗುರುವನ್ನು ಆಶ್ರಯಿಸುತ್ತಲೇ ಬಂದಿದ್ದಾನೆ. ಏಕೆಂದರೆ ಗುರುವು ಸದ್ಗತಿಯನ್ನು ತೋರಿಸುತ್ತಾನೆ ಎಂದು.

ಧರ್ಮದಪ್ರಕಾರ ಆಚರಿಸದೆ ಇದ್ದವರಿಗೆ ಪುನರ್ಜನ್ಮ (ಮರಳಿಹುಟ್ಟುವಿಕೆ) ಅಧೋ ಜನ್ಮ (ಕೆಳಗಿನ ದರ್ಜೆಯ ಪ್ರಾಣಿಯಾಗಿ ಹುಟ್ಟುವಿಕೆ) ಮೊದಲಾದ ಶಿಕ್ಷೆಯು ಸಹಜವಾಗಿ ಇದ್ದೇ ಇರುತ್ತದೆ. ಇಂತಹ ಶಿಕ್ಷೆಯನ್ನು ಹೊಂದುವಸ್ಥಿತಿಯನ್ನು ಪಡೆದುಕೊಂಡವನಿಗೆ ಮಹಾದೇವನು ಕೊಡಿಸಿದನು, ಎಂದು ಕೆಲವರು ತಿಳಿಯುತ್ತಾರೆ. ಹೀಗೆ ತಪ್ಪಿ ನಡೆದಾಗ ಗುರುವಿನ ಬಳಿಗೆ ಹೋದರೆ ಗುರುವು ಆ ಮಹಾದೇವನ ಅನುಭಾವನನ್ನು ಉಂಟು ಮಾಡಿ ಇವನ ಮುಂದಿನ ಜನ್ಮದ ತೊಂದರೆಗಳನ್ನು ತಪ್ಪಿಸುತ್ತಾನೆ. ಗುರುವು ಇಂತಹ ಜ್ಞಾನವನ್ನು ಬೋಧೆಮಾಡುವುದಕ್ಕೆ ಒಲ್ಲನೆ ಕೋಪಗೊಂಡು ಇವನ ಕರ್ಮದ ಫಲಗಳನ್ನು ಇವನೇ ಅನುಭವಿಸಲಿ ಎಂದು ಬಿಡುವುದಾದರೆ ಶಿವನೇ ಪ್ರತ್ಯಕ್ಷವಾಗಿ ಬಂದು ಇವನಿಗೆ ಬೋಧಿಸುವುದಿಲ್ಲ ತಪ್ಪಿಗೆ ತಕ್ಕಶಿಕ್ಷೆಯನ್ನು ಅನುಭವಿಸಲೇ ಬೇಕಾಗುತ್ತದೆ ಹೀಗೆ ಗುರುವೇ ಪಾರಮಾರ್ಥಿಕ ಸನ್ಮಾರ್ಗವನ್ನು ತೋರಿಸುವುದರಲ್ಲಿ ಮುಖ್ಯನು ಆದುದರಿಂದ ಗುರುವೇ ಪ್ರತ್ಯಕ್ಷದೇವನೆಂದು ಅನೇಕ ಉಪನಿಷತ್ತುಗಳೂ ಹೇಳುತ್ತವೆ.

---

೧೦೨ ಮನ್ನಾಥ ಮದ್ಗುರು ಜ | ಗನ್ನಾಥ ಜಗದ್ಗುರುವೆ
ಎನ್ನ ಅವಗುಣವ—ನೋಡದಲೆ ಸಲಹೆಂದು
ಸನ್ನುತಿಗೆಯ್ದನಾ ಶ್ರೀ ಗುರುವ

ತಾತ್ಪರ್ಯ

' ನನ್ನ ಒಡೆಯನೆ, ನನ್ನ ಗುರುವೇ, ಜಗತ್ತಿನಒಡೆಯನೇ ಜಗತ್ತಿನ ಗುರುವೇ ನನ್ನ ಕೆಟ್ಟ ಗುಣವನ್ನು ನೋಡದೆ ಕಾಪಾಡು, ಎಂಬುದಾಗಿ ಶ್ರೀಗುರುವನ್ನು ಹೊಗಳಿದನು.

ವಿಚಾರ

ವಿದ್ಯೆಕಲಿಸಿದವರು, ಕೆಲಸ ಕಲಿಸಿದವರು, ಹೀಗೆ ಗುರುಗಳು ಅನೇಕರೆಂದು ತೋರುತ್ತಿದ್ದಾಗ್ಯೂ ಗುರುತತ್ವವು ಒಂದೇ ಇರುತ್ತದೆ. ತನಗೆ ಮಂತ್ರೋಪದೇಶವನ್ನು ಮಾಡಿ ಮೋಕ್ಷೋಪಾಯವನ್ನು ಬೋಧಿಸುವುದರಲ್ಲಿ ಯಾರು ಕೊನೆಯವನಾದ ಗುರುವೋ ಆ ಗುರುವಿನಲ್ಲಿ ತನ್ನ ಎಲ್ಲಾ

ಗುರುಗಳಲ್ಲಿನ ಗುರುತತ್ತ್ವವು ಅಡಗಿದೆ ಎಂದು ತಿಳಿದು ಆತನನ್ನೇ ಮು ಖ್ಯನನ್ನಾಗಿ ಭಾವಿಸಬೇಕು.

---

೧೯೩ ಜನ್ಮ ಶತಕೋಟಿಯಲಿ | ನಿಮ್ಮ ನಿಜವರಿಯದಲೆ
ಬೊಮ್ಮವನು ನುಡಿದು—ತೊಳಲಿದೆ ಭವ ಭವದಿ
ಎಮ್ಮಯ್ಯ ನೋಡಿ ಸಲಹೆಂದ

ತಾತ್ಪರ್ಯ

'ಹಿಂದೆ ನೂರು ಕೋಟಿ ಜನ್ಮಗಳಲ್ಲಿ ಗುರುವಿನ ನಿಜತತ್ವವನ್ನು ತಿಳಿಯದೆ ನಾನೇ ಬ್ರಹ್ಮನೆಂದು ನುಡಿದು ಅನೇಕ ಜನ್ಮಗಳಲ್ಲಿ ತಿರುಗಿದೆನು. ನಮ್ಮ ಅಪ್ಪನೇ, ಕರುಣದೃಷ್ಟಿಯಿಂದ ನೋಡಿ ನನ್ನನ್ನು ರಕ್ಷಿಸು' ಎಂದು ಹೇಳಿದನು.

ಪ್ರಮಾಣ

ತ್ರಿಪಾದ್ವಿಭೂತಿ ಮಹಾನಾರಾಯಣೋಪನಿಷತ್ ೫ನೆಯ ಅಧ್ಯಾಯ.
ಗುರೂಪದೇಶೇನ ವಿನಾ ಕಲ್ಪಕೋಟಿಭಿಸ್ತತ್ತ್ವ ಜ್ಞಾನಂ ನ ವಿದ್ಯತೇ
ತಸ್ಮಾತ್ ಸದ್ಗುರು ಕಟಾಕ್ಷ ಲೇಶ ವಿಶೇಷೇಣಾಚಿರಾದೇವ
ತತ್ತ್ವ ಜ್ಞಾನಂ ಭವತಿ.

ಭಾವಾರ್ಥ

ಗುರುವಿನ ಉಪದೇಶವಿಲ್ಲದೆ ಕಲ್ಪಕೋಟಿ ವರ್ಷಗಳಾದರೂ ತತ್ತ್ವ ಜ್ಞಾನವು ಉಂಟಾಗುವುದಿಲ್ಲ. ಆದ್ದರಿಂದ ಸದ್ಗುರುವಿನ ಕಟಾಕ್ಷ ಸ್ವಲ್ಪ ವಾಗಿದ್ದರೂ ಅದರ ವಿಶೇಷದಿಂದ ತತ್ತ್ವ ಜ್ಞಾನವು ಬೇಗನೆ ಆಗುತ್ತದೆ.

ವಿಚಾರ

ನಾನೇ ದೊಡ್ಡವನು ಎಂಬ ಭಾವನೆಯು ಸೋಹಂ ಶಿವೋಹಂ ಎಂಬ ಜ್ಞಾನದಿಂದ ಉಂಟಾಗುತ್ತದೆ ಇಷ್ಟರಿಂದಲೇ ಮನುಷ್ಯನ ಪರಿಣಾ ಮವಾಗುವುದಿಲ್ಲ. ಸೋಹಂ ಭಾವವು ಬಂದಮೇಲೆ ದಾಸೋಹಂ ಭಾವ ವು ಬರಬೇಕು. ಎಂದರೆ ಗುರುವೇ ದೊಡ್ಡವನು ಲಿಂಗವೇ ದೊಡ್ಡದು, ಜಂಗಮನೇ ದೊಡ್ಡವನು ಎಂಬ ಭಾವನೆಯಿಂದ ತನ್ನ ತನು ಮನ ಪ್ರಾ ಣಗಳನ್ನು ಗುರು ಲಿಂಗ ಜಂಗಮಕ್ಕೆ ಒಪ್ಪಿಸಿ ಆ ಗುರು ಲಿಂಗ ಜಂಗಮ ಸ್ವರೂಪವೇ ತಾನೆಂಬ ಅನುಭಾವವು ಬಂದರೆ ಅದೇ ಕಟ್ಟ ಕಡೆಯ ಸ್ಥಿತಿ ಯು. ಇದಕ್ಕಿಂತಲೂ ಹೆಚ್ಚಿನ ಪರಿಣಾಮವಿಲ್ಲ.

---

೧೦೪ ಲಿಂಗವನು ಧರಿಸೆನ್ನ | ಅಂಗ ಭವ ಮಾಲೆಗಳ
ಹಿಂಗಿಸುತ ಲಿಂಗ—ದಂಗದವಿರಳ ಪದದಿ
ಹಿಂಗದಾ ಸ ಖವ ಕೊಡು ಎಂದ

ತಾತ್ಪರ್ಯ

'ಗುರುವೆ, ಲಿಂಗವನ್ನು ಧರಿಸು, ನನ್ನ ಅಂಗದ ಜನ್ಮದ(ಹುಟ್ಟುವಿಕೆಯು) ಪರಂಪರೆಯನ್ನು (ಒಂದಾಗುತ್ತಲೇ ಮತ್ತೊಂದು ಬರುವುದನ್ನು) ಹೋಗಲಾಡಿಸುತ್ತಾ ಪರಬ್ರಹ್ಮ(ಲಿಂಗ)ದ ಅಂಗದಲ್ಲಿ ಭಿನ್ನವಾಗದೆ ಇರುವ ಸ್ಥಿತಿಯಲ್ಲಿ ತಪ್ಪಿ ಹೋಗದಂತಹ ಸುಖವನ್ನು ಕೊಡು'ಎಂದು ಹೇಳಿದನು.

೧ ಪ್ರಮಾಣ: ನಿರ್ಲೇಪೋಪನಿಷತ್

......ಲಿಂಗಂ ಧೃತ್ವಾ ಹೃದಯೇ ಮುಕ್ತ ಸಂಗಃ।
ಪರಂಜ್ಯೋತಿಃ ಪ್ರವಿಶತ್ಯೇಕರೂಪಂ ಶಿವಧ್ಯಾನೇ ಶಿವಪೂಜಾ ಪ್ರಸಂಗೇ
...ಏವಂ ಸ್ಥಿತ್ವಾ ಸಂಸೃತೌವರ್ತಮಾನಃ ಸಂಸಾರೀವ
ಸುಖದುಃಖಾದಿ ಭೋಕ್ತಾ | ......ಮೂಢಧೀಭಿರ್ವಿಮುಕ್ತಃ
ಇತ್ಯಾಹ ಭಗವಾನ್ ಪಿಪ್ಪಲಾದೋ ಹೃದಿ ಲಿಂಗಂ ಧೃತ್ವಾ ಮೂಢೋಪಿ ಪರಂಜ್ಯೋತಿಃ ಪ್ರವಿಶತ್ಯೋಂ ಸತ್ಯಮಿತ್ಯುಪನಿಷತ್
(ಈಉಪನಿಷತ್ತು ಮೈಸೂರಿನ ಪ್ರಾಚ್ಯಕೋಶಾಲಯದಲ್ಲಿನ ಬರಹದ ಪ್ರತಿ)

ಭಾವಾರ್ಥ

ಪಿಪ್ಪಲಾದ ಋಷಿಯು ಹೇಳುತ್ತಾನೆ:—

ಹೃದಯದಲ್ಲಿ(ಎದೆಯಲ್ಲಿ) ಲಿಂಗವನ್ನು ಧರಿಸಿ ಪ್ರಾಪಂಚಿಕ ಸಂಗವನ್ನು ಬಿಟ್ಟವನಾಗುತ್ತಾನೆ. ಶಿವಪೂಜೆ ಮಾಡುವ ಸಂದರ್ಭದಲ್ಲಿ ಶಿವಧ್ಯಾನದಲ್ಲಿ ಲಿಂಗವೂ ಅಂಗವೂ ಒಂದೇ ಎಂಬ ಏಕರೂಪವನ್ನು ಹೊಂದುತ್ತಾನೆ.... ಈರೀತಿ ಸಂಸಾರದಲ್ಲಿ ಇರುವವನಾಗಿ ಇಷ್ಟು ಸಂಸಾರಿಯಂತೆ ಸುಖದುಃಖ ಮೊದಲಾದವುಗಳನ್ನು ಅನುಭವಿಸುವವನಾಗುತ್ತಾನೆ. ಮೂಢಬುದ್ಧಿ (ತನಗಿಂತ ಅನ್ಯನು ದೇವನೆಂಬ ಭಿನ್ನಬುದ್ಧಿ)ಯಿಂದ ಬಿಡುಗಡೆಯನ್ನು ಹೊಂದುತ್ತಾನೆ. ಹೃದಯದಲ್ಲಿ ಲಿಂಗವನ್ನು ಧರಿಸಿ ಮೂಢನಾದರೂ ಪರಂಜ್ಯೋತಿಯಲ್ಲಿ (ಮಹಾದೇವನಲ್ಲಿ) ಪ್ರವೇಶಿಸುತ್ತಾನೆ. ಹೀಗೆ ಇದು ಸತ್ಯವು. (ಮೂಲಪ್ರಣವದವ್ಯಾಹೃತಿ)

ಹೀಗೆ ಉಪನಿಷತ್ತು(ಮುಗಿದುದು)

೨ ಪ್ರಮಾಣ

ಶ್ರೀ ಜಾಬಾಲ ದರ್ಶನೋಪನಿಷತ್ ಆನೆಯ ಖಂಡ ಶ್ಲೋಕ ೭-೯

ಅಥ ವಾ ತವ ವಕ್ಷ್ಯಾಮಿ ಧಾರಣಾಂ ಮುನಿ ಪುಂಗವ|
ಪುರುಷೇ ಸರ್ವ ಶಾಸ್ತಾರಂ ಬೋಧಾನಂದ ಮಯಂ ಶಿವಂ
ಧಾರಯೇದ್ ಬುದ್ಧಿಮಾನ್ ನಿತ್ಯಂ ಸರ್ವ ಪಾಪ ವಿಶುದ್ಧಯೇ॥
ಬ್ರಹ್ಮಾದಿ ಕಾರ್ಯರೂಪಾಣಿ ಸ್ವೇ ಸ್ವೇ ಸಂಹೃತ್ಯ ಕಾರಣೇ
ಸರ್ವ ಕಾರಣ ಮವ್ಯಕ್ತಮನಿರೂಪ್ಯ ಪ್ರಚೇತನಂ
ಸಾಕ್ಷಾದಾತ್ಮನಿ ಸಂಪೂರ್ಣೇ ಧಾರಯೇತ್ ಪ್ರಣವೇನ ತು

ಭಾವಾರ್ಥ

ದತ್ತಾತ್ರೇಯನು ಸಾಂಕೃತಿಗೆ ಹೇಳುತ್ತಾನೆ.

ಮುನಿಶ್ರೇಷ್ಠನೇ ಇನ್ನು ನಿನಗೆ ಧಾರಣವನ್ನು ಹೇಳುತ್ತೇನೆ. ಮನುಷ್ಯನಲ್ಲಿ ಸರ್ವ ಪಾಪಶುದ್ಧಿಗಾಗಿ ಎಲ್ಲರಿಗೂ ಶಾಸನ ಮಾಡುವವನಾದ, ತಿಳಿವಿಕೆಯಲ್ಲಿ ಆನಂದ ಮಯನಾದ, ಶಿವನನ್ನು ಬುದ್ಧಿವಂತನು ನಿತ್ಯವೂ ಧಾರಣಮಾಡಬೇಕು. ಬ್ರಹ್ಮನೇ ಮೊದಲಾದವರು ಕಾರ್ಯರೂಪರು. ತನ್ನಲ್ಲಿತಾನು ಕಾರಣದಲ್ಲಿ ಕೂಡಿ ಸರ್ವ ಕಾರಣನಾದ ಶ್ರೇಷ್ಠಚೈತನ್ಯನಾದ ಅವ್ಯಕ್ತನನ್ನು (ಹಾಗೆ ಹೀಗೆಂದು ಬೇರೆಮಾತಿನಲ್ಲಿ) ನಿರೂಪಿಸದೆ ಪ್ರತ್ಯಕ್ಷವಾಗಿ ತನ್ನೊಳಗೆ ಸಂಪೂರ್ಣವಾಗಿ (ಎಲ್ಲೆಡೆಯಲ್ಲಿಯೂ) ಪ್ರಣವ ಮೂಲಕವಾಗಿ ಧರಿಸಬೇಕು (ಶಿವನ ರೂಪವನ್ನು ಲಿಂಗರೂಪದಲ್ಲಿ ತಿಳಿಯಬೇಕೆಂಬುದಕ್ಕೆ ಬಹಳ ಕಡೆ ಪ್ರಮಾಣಗಳಿವೆ. ಇಲ್ಲಿ ಶಿವನ ಧಾರಣೆ ಎಂದರೆ ಲಿಂಗಧಾರಣೆ ಎಂದು ಅರ್ಥವು)

ಟಿಪ್ಪಣಿ: — ಶಿವಾದ್ವೈತಿಗಳು ಆಚರಿಸುವ ಲಿಂಗಧಾರಣವು ಇದರಲ್ಲಿ ಹೇಳಲ್ಪಟ್ಟ ಲಕ್ಷಣವುಳ್ಳುದು. ಪ್ರಣವವನ್ನು ಮೊದಲು ಬೋಧೆಮಾಡಿ ಅದರ ಸ್ವರೂಪವೇ ಲಿಂಗವೆಂದು ಗುರುವು ಶಿಷ್ಯನಿಗೆ ಕೊಡುತ್ತಾನೆ. ಇದರಲ್ಲಿ ಹೇಳಲ್ಪಟ್ಟ ಸಾಕ್ಷಾತ್ (ಪ್ರತ್ಯಕ್ಷವಾಗಿ) ಎಂಬ ಪದವು ಇಷ್ಟಲಿಂಗಧಾರಣೆಗೂ ಆತ್ಮನಿ(ತನ್ನೊಳಗೆ) ಎಂಬ ಪದವು ಪ್ರಾಣಲಿಂಗಧಾರಣೆಗೂ ಸಂಪೂರ್ಣೇ (ಎಲ್ಲೆಡೆಯಲ್ಲಿಯೂ) ಎಂಬ ಪದವು ಭಾವಲಿಂಗಧಾರಣೆಗೂ ಅನ್ವಯಿಸುತ್ತದೆ. ಮತ್ತು ನಿತ್ಯವೂ ಶಿವನನ್ನು ಧಾರಣೆಮಾಡಬೇಕು, ಎಂಬುದೇ ಮೊದಲಾದ ಇಲ್ಲಿ ಹೇಳಲ್ಪಟ್ಟ ಬೋಧೆ

ಯಂತೆ ನಡೆಯುವ ಆಚಾರವು ಲಿಂಗಾಂಗ ಸಮರಸದಲ್ಲಿ ರೂಢವಾಗಿರುವು ದೇ ಹೊರತು ಹಿಂದೂಗಳ ಇತರ ಯಾವ ಆಚಾರದಲ್ಲಿಯೂ ರೂಢವಾಗಿಲ್ಲ.

ವಿಚಾರ

ಇಷ್ಟಲಿಂಗವನ್ನು ಧರಿಸುವುದು ಕರ್ಮಮಾರ್ಗವೆಂದು ಕೆಲವರು ತಿಳಿಯುತ್ತಾರೆ ಇದು ಸರಿಯಲ್ಲ ಆತನು ತನಗಿಂತ ಭಿನ್ನವಾಗಿ ಇರುವ ಲಿಂಗವನ್ನು ಧರಿಸಿದ್ದೇನೆ ಎಂತ ತಿಳಿಯಬಾರದು. ತಾನೂ ಲಿಂಗವೂ ಒಂದೇ ಎಂಬ ಜ್ಞಾನವನ್ನು ಮೊಟ್ಟಮೊದಲು ಉಂಟಾಗಿದ್ದು ಆ ಒಂದೇ ಎಂಬುದನ್ನು ಸ್ಥಿರಮಾಡುವುದಕ್ಕಾಗಿ ಮಾಡುವ ಕ್ರಿಯೆಯೇ ಭಕ್ತಿಮಾರ್ಗವಾಗಿರುತ್ತದೆ. ಈ ಭಕ್ತಿಮಾರ್ಗವೇ ಶಿವಪೂಜೆ ಮೊದಲಾದ ಕಾರ್ಯಗಳು. ಇವುಗಳನ್ನು ಮಾಡುವವನು ಶಾಸ್ತ್ರವನ್ನು ಓದದೆ ಇದ್ದಾಗ್ಯೂ ತಾನು ಮಾಡುವ ಕೆಲಸಗಳಿಂದಲೇ ಇವನಿಗೆ ಅದ್ವೈತಸಿದ್ಧಿಯಾಗುತ್ತದೆ. ಆದುದರಿಂದಲೇ ವೇದಶಾಸ್ತ್ರಗಳನ್ನು ಓದಿ ಸುಮ್ಮನೆ ಬೇಸರ ಪಡುವುದಕ್ಕಿಂತಲೂ ಲಿಂಗಾಂಗ ಸಾಮರಸ್ಯವನ್ನು ಆಚರಿಸಿದರೆ ಸಾಕೆಂದು ಬಸವೇಶ್ವರನೇಮೊದಲಾದ ಶಿವಶರಣರು ಬೋಧಿಸಿದ್ದಾರೆ.

---

೧೦೫ ಇಂತೆಂದ ಶಿಷ್ಯಂಗೆ|ಕಂತುಹರ ಗುರುವೊಲಿದು
ಸಂತಸದಿ ದೀಕ್ಷೆ—ಯನು ಗೆಯ್ದ ಸಮಯದೊಳು
ಚಿಂತಿಸಿದ ನಿಟಲ ಬ್ರಹ್ಮನನು.

ತಾತ್ಪರ್ಯ

ಹೀಗೆಂದು ಹೇಳಿದ ಶಿಷ್ಯನಿಗೆ ಕಾಮನನ್ನು ಗೆದ್ದವ ( ಜಿತೇಂದ್ರಿಯ ) ನಾದ ಗುರುವು ಪ್ರಸನ್ನನಾಗಿ ಸಂತೋಷದಿಂದ ದೀಕ್ಷೆಯನ್ನು ಮಾಡಿದ ಸಮಯದಲ್ಲಿ ಆತನ ಹಣೆಯಲ್ಲಿ ಇರುವ ಬ್ರಹ್ಮನನ್ನು ತನ್ನ ದೃಷ್ಟಿಯಿಂದ ಚಿಂತಿಸಿದನು.

ವಿಚಾರ

ಶಿಷ್ಯನಲ್ಲಿ ಇರುವ ತಾನು ಮನುಷ್ಯ ಎಂಬ ಭಾವಕ್ಕೆ ಸಂಬಂಧಪಟ್ಟ ಆಣವ ಮಲ ಮಾಯಾ ಮಲ ಕಾರ್ಮಿಕಮಲಗಳೆಂಬ ಮೂರುಮಲಗಳನ್ನು ದೂರಮಾಡಿ ತಾನು ಶಿವ( ಬ್ರಹ್ಮ )ಎಂಬ ಜ್ಞಾನವನ್ನು ಕೂಡಿ ಶಿ

ವಾನುಭಾವಕ್ಕೆ ಅಣಿಮಾಡುವುದೇ ದೀಕ್ಷೆಯು. ಈ ದೀಕ್ಷೆಯಿಂದ ಅವನಿಗೆ ಹಿಂದಿನ ಜನ್ಮದ ಸಂಬಂಧವು ತಪ್ಪಿ ಹೋಗುತ್ತದೆ. ಮುಂದೆ ಅವನು ಸಾಕಾರ ಬ್ರಹ್ಮನಾಗಿ ಕ್ರಿಯಾಚರಣೆಗಳನ್ನು ಮಾಡಬೇಕು.

ತಲೆಯ ಮುಂಭಾಗದಲ್ಲಿ ಇರುವ ಬ್ರಹ್ಮರಂಧ್ರಕ್ಕೂ ಹೃದಯ ಎಂತ ಕರೆಯುತ್ತಾರೆ. ಇದು ಒಳಗಿನ ದೇಹದ ಹೃದಯವಾಗಿದೆ. ಈ ಹೃದಯದಿಂದಲೇ ಗುರುವು ಚಿತ್‌ಕಳೆಯನ್ನು ತೆಗೆದು ಹಣೆಯಲ್ಲಿ ಇರುವ ಭ್ರೂಮಧ್ಯಕ್ಕೆ ತಂದು ಅಲ್ಲಿಂದ ನೇತ್ರಗಳಿಗೆ ತಂದು ಶಿಷ್ಯನಿಗೆ ಲಿಂಗರೂಪವ ಮಾಡಿ ಕೊಡುತ್ತಾನೆ. ಇಲ್ಲಿ ಬ್ರಹ್ಮ, ಲಿಂಗ, ಇವೆರಡೂ ಒಂದೇ ಅರ್ಥವುಳ್ಳ ಪದಗಳಾಗಿವೆ. ಈ ಪದಗಳಿಂದ ನಿರಾಕಾರ ವಸ್ತುವೇ ತಿಳಿಯಲ್ಪಡುವನು.

---

೧೦೭ ರವಿಯ ಶಿಲೆಯೊಳು ವಹ್ನಿ | ರವಿ ಸೋಂಕೆ ಸ್ಫುರಿಪಂತೆ
ರವಿ ನೇತ್ರ ಗ್ಲೌನ—ನೀಕ್ಷಿಸಲು ನಿಟಲದೊಳು
ರವಿಕೋಟಿ ತೇಜನುದಿಸಿದನು.

ತಾತ್ಪರ್ಯ

ಸೂರ್ಯಕಾಂತ ಶಿಲೆಯಲ್ಲಿ ಸೂರ್ಯನ ಕಿರಣವು ಬೀಳಲು ಬೆಂಕಿ (ಜ್ವಾಲೆ) ಯು ತೋರುವಹಾಗೆ ಶಿಷ್ಯನ ಸೂರ್ಯನೇತ್ರ ಚಂದ್ರನೇತ್ರಗಳನ್ನು ನೋಡಲು ಹಣೆಯಲ್ಲಿ ಕೋಟಿ ಸೂರ್ಯ ಪ್ರಕಾಶವುಳ್ಳ ಜ್ಯೋತಿಸ್ವರೂಪ ನಿಷ್ಕಲ ಬ್ರಹ್ಮನು (ಲಿಂಗವು) ಹುಟ್ಟಿದನು. ಈ ನಿಷ್ಕಲವು ಇಂದ್ರಿಯಗೋಚರವಾದುದಲ್ಲ.

೧ ಪ್ರಮಾಣ

ಅದ್ವಯ ತಾರಕೋಪನಿಷತ್

ಅಂತರ್ಬಾಹ್ಯ ಲಕ್ಷ್ಯೇ ದೃಷ್ಟೌ ನಿಮೇಷೋನ್ಮೇಷವರ್ಜಿತಾಯಾಂ ಸತ್ಯಾಂ ಶಾಂಭವೀ ಮುದ್ರಾ ಭವತಿ ತನ್ಮುದ್ರಾರೂಢ ಜ್ಞಾನಿ ನಿವಾಸಾದ್ ಭೂಮಿ: ಪವಿತ್ರಾ ಭವತಿ ತದ್ ದೃಷ್ಟ್ವಾ ಸರ್ವೇ ಲೋಕಾ: ಪವಿತ್ರಾ ಭವಂತಿ ತಾದೃಶ ಪರಮಯೋಗಿ ಪೂಜಾ ಯಸ್ಯ ಲಭ್ಯತೇ ಸೋಪಿ ಮುಕ್ತೋಭವತಿ ಅಂತರ್ಲಕ್ಷ್ಯ ಜಲಜ್ಯೋತಿ: ಸ್ವರೂಪಂ ಭವತಿ ಪರಮ ಗುರೂಪದೇಶೇನ ಸ

ಹಸ್ರಾರೇ ಜಲ ಜ್ಯೋತಿರ್ವಾ ಬುದ್ಧಿಗುಹಾ ನಿಹಿತ ಜ್ಯೋತಿರ್ವಾ ಷೋಡಶಾಂತಸ್ಥ ತುರೀಯ ಚೈತನ್ಯಂ ವಾ ಅಂತರ್ಲಕ್ಷ್ಯಂ ಭವತಿ ತದ್ದರ್ಶನಂ ಸದಾಚಾರ್ಯ ಮೂಲಂ

ಭಾವಾರ್ಥ

ಹೊರಗಿನ ಪ್ರಪಂಚದ ಕಡೆಗೂ ಒಳಗೆ ತನ್ನ ಪಿಂಡಾಂಡದ ಭಾಗದಲ್ಲಿಯೂ ದೃಷ್ಟಿಯನ್ನಿಡಲು ಕಣ್ಣಿನ ರೆಪ್ಪೆಯಾಡಿಪುದು ನಿಲ್ಲುವುದು. ಹೀಗಾಗುವುದೇ ಶಾಂಭವೀ ಮುದ್ರೆಯು. ಈ ಮುದ್ರೆಯನ್ನು ಹೊಂದಿರುವ ಜ್ಞಾನಿಯ ವಾಸದಿಂದ ಭೂಮಿಯು ಪವಿತ್ರವಾಗುತ್ತದೆ. ಇವನನ್ನು ನೋಡಿ ಸಮಸ್ತ ಜನರೂ ಪವಿತ್ರರಾಗುತ್ತಾರೆ. ಇಂತಹ ಪರಮಯೋಗಿಯ ಪೂಜೆಯು ಯಾರಿಗೆ ದೊರಕುವುದೋ ಅವನು ಮುಕ್ತನು. ತನ್ನ ಪಿಂಡಾಂಡದಲ್ಲಿ ನೋಡುವಾಗ ಹೊರಗಿನ ದೀಪದ ನೆರಳು ನೀರಲ್ಲಿ ಬಿದ್ದಾಗ ಹೇಗೆ ಕಾಣುವುದೋ ಹಾಗೆ ಒಳಗೆ ಜ್ಯೋತಿಯು ಕಾಣುತ್ತದೆ. ಮುಂದೆ ಸಾಧನೆಯಿಂದ ಆ ಜ್ಯೋತಿಯು ಸ್ವರೂಪನೇ ತಾನಾಗುತ್ತಾನೆ.

ಪರಮ ಗುರುವಿನ ಉಪದೇಶದಿಂದ ಸಹಸ್ರಾರ (ಬ್ರಹ್ಮರಂಧ್ರ) ದಲ್ಲಿ ಜಲಜ್ಯೋತಿ (ನೀರೊಳಗಿನ ದೀಪದ ನೆರಳು) ಯಾಗಲೀ, ಬುದ್ಧಿಗುಹೆಯಲ್ಲಿರುವ ಜ್ಯೋತಿಯಾಗಲೀ, ಕರ್ಮೇಂದ್ರಿಯ ಜ್ಞಾನೇಂದ್ರಿಯ, ಪಂಚಪ್ರಾಣ ಆತ್ಮ ಹೀಗೆ ಹದಿನಾರರ ಒಳಗಿರುವ ತುರೀಯ (ಳನೆಯ) ಅವಸ್ಥೆಯ ಚೈತನ್ಯವಾಗಲೀ ಒಳಗಿನ ಲಕ್ಷ್ಯದಲ್ಲಿ ಕಾಣುತ್ತದೆ. ಇದು ಯಾರಿಗೆ ಕಾಣುವುದೋ ಅವನು ಒಳ್ಳೆಯ ಗುರುವೆಂದು ತಿಳಿಯುವುದಕ್ಕೆ ಮೂಲ ಸಂಗತಿಯು. ಇಂತಹ ಸ್ಥಿತಿಯನ್ನು ಹೊಂದಿದವನೇ ಸದ್ಗುರುವು.

೨ ನೆಯ ಪ್ರಮಾಣ

ವೇದಾಂತ ಸಾರೋಪನಿಷತ್

ಲಿಂಗಂ ಪರಂ ಜ್ಯೋತಿಷಾಂ ಜ್ಯೋತಿ ರೂಪಂ। ಪರಾತ್ಪರಂ ಯನ್ಮಹತೋ ಮಹಾಂತಂ ಅಣೋರಣು ಸ್ತನ್ಮಹತೋ ಮಹತ್ | ತದಾತ್ಮ ಸ್ವರೂಪ ಬ್ರಹ್ಮಲಿಂಗಂ ಹೃದಿಸ್ಥಂ

ಭಾವಾರ್ಥ

ಲಿಂಗವು ಜ್ಯೋತಿಗಳಲ್ಲಿ ಶ್ರೇಷ್ಠವಾದ ಜ್ಯೋತಿಯು. ಪರಕ್ಕಿಂತಲೂ

ಪರವಾದುದಾಗಿ ದೊಡ್ಡದಕ್ಕಿಂತಲೂ ದೊಡ್ಡದೆನಿಸಿಕೊಂಡು ಇರುವುದು. ಅಣುವಿಗೆ ಅಣುವಾಗಿಯೂ ದೊಡ್ಡದಕ್ಕೆ ದೊಡ್ಡವಾಗಿಯೂ ಇರುವ ಆ ಲಿಂಗವು ತನ್ನ ಸ್ವರೂಪವಾದ ಬ್ರಹ್ಮ ಎನಿಸಿಕೊಂಡು ಹೃದಯದಲ್ಲಿ ಇರುವದಾಗಿ ಇರುತ್ತದೆ. (ಸ್ಥೂಲ ದೇಹದ ಹೃದಯವು ಎದೆ ಎಂದು ತಿಳಿಯಲ್ಪಡುತ್ತದೆ-)

ವಿಚಾರ

ಶಾಂಭವೀ ಮುದ್ರೆಯನ್ನು ಬಲ್ಲ ಸದ್ಗುರುವಿನಿಂದಲೇ ಬ್ರಹ್ಮರಂಧ್ರದ ಚಿತ್ಕಲೆಯು ತೆಗೆಯಲ್ಪಟ್ಟು ಶಿಷ್ಯನಿಗೆ ಇಷ್ಟಲಿಂಗರೂಪವಾಗಿ ಕೊಡಲ್ಪಡುತ್ತದೆ.

---

೧೦೭ ಇಂದು ಶಿಲೆಯಲ್ಲಿ ಪೂರ್ಣೇಂದು ಬಿಂಬಿಸುವ ಪರಿ
'ಯಂ' (ಚಂ)ದದಿಂ ಗುರುವಿ—ನುಪದೇಶ ವಾಗಲ್ಕೆ
ಇಂದುಧರನಿಳಿದ ಕರತಳಕೆ.

ತಾತ್ಪರ್ಯ

ಚಂದ್ರಕಾಂತ ಶಿಲೆಯಲ್ಲಿ ಪೂರ್ಣಚಂದ್ರನ ಕಳೆಗಳೆಂಬ ಅಮೃತವು ಬಿಂಬಿಸುವಹಾಗೆ ಗುರುವಿನ ಉಪದೇಶವಾಕ್ಯಗಳೆಂಬ ಅಮೃತವು ಶಿಷ್ಯನಲ್ಲಿ ಕೂಡಲು ಚಂದ್ರಕಾಂತಶಿಲೆಯಿಂದ ನೀರು ಹೊರಗೆ ಬರುವ ಹಾಗೆ ಸಕಲ ನಿಷ್ಕಲರೂಪ ಲಿಂಗನು ಹೊರಗೆ ಬಂದು ಶಿಷ್ಯನ ಹಸ್ತದ ಮಧ್ಯಕ್ಕೆ ಇಳಿದನು.

ಪ್ರಮಾಣ

ಜಾಬಾಲ ದರ್ಶನೋಪನಿಷತ್ ೮ನೆಯ ಖಂಡ ಶ್ಲೋಕ ೭-೮

ಅಥ ವಾ ತವ ವಕ್ಷ್ಯಾಮಿ ಧಾರಣಾಂ ಮುನಿ ಪುಂಗವ |
ಪುರುಷೇ ಸರ್ವ ಶಾಸ್ತಾರಂ ಬೋಧಾನಂದಮಯಂ ಶಿವಂ ।
ಧಾರಯೇದ್ ಬುದ್ಧಿಮಾನ್ ನಿತ್ಯಂ ಸರ್ವ ಪಾಪ ವಿಶುದ್ಧಯೇ ||

ಭಾವಾರ್ಥ

ಕಾಲಾಗ್ನಿ ರುದ್ರನು ಭುಸುಂಡ ಎಂಬ ಮುನಿಗೆ ಹೇಳುತ್ತಾನೆ. ಮುನಿಶ್ರೇಷ್ಠನಾದ ಭುಸುಂಡನೇ, ನಿನಗೆ ಧಾರಣವನ್ನು ಹೇಳುತ್ತೇನೆ-ಸರ್ವ ಪುರುಷರಲ್ಲಿ ಆಜ್ಞೆಮಾಡುವವನಾದ, ಬೋಧೆ(ತಿಳಿಯಪಡಿಸುವದು)ಎಂಬ ಆನಂದದಿಂದ ತುಂಬಿದವನಾದ ಶಿವನನ್ನು ಸರ್ವ ಪಾಪಗಳಿಂದ ಶುದ್ಧಿಯನ್ನು

ಹೊಂದುವುದಕ್ಕಾಗಿ ಬುದ್ಧಿವಂತನಾದವನು ಯಾವಾಗಲೂ ಧರಿಸಬೇಕು.
(ಇಲ್ಲಿ 'ಶಿವ' ನನ್ನು ಎಂದರೆ ಲಿಂಗವನ್ನು ಎಂಬ ಅರ್ಥಮಾಡಬೇಕು.
ಹೀಗೆ ಲಿಂಗಕ್ಕೆ 'ಶಿವ' ಎಂತ ಕರೆದಿರುವ ಪ್ರಮಾಣಗಳು ಬಹಳವಾಗಿಇವೆ.)

---

೧೦೮ ಈ ಲಿಂಗ ನಿನ್ನಂಗ | ಈ ಲಿಂಗ ನಿನ್ನಾತ್ಮ,
ಈ ಲಿಂಗ ನಿನ್ನ—ಪರಣ ಕರಣೆ ಂದ್ರಿಯ 'ವು'(ಕೆ)
'ಈ ಲಿಂಗವೆ ತಾನೆಂದೊರೆ :ಸು'.
(ಈ ಲಿಂಗ ಒಡೆಯು ನೆಂದೂರೆಪ )

ತಾತ್ಪರ್ಯ

ಈ ಲಿಂಗವು ನಿನ್ನ ಅಂಗವು. ಈ ಲಿಂಗವು ನಿನ್ನ ಆತ್ಮವು, ಈ ಲಿಂಗವು ನಿನ್ನ ಪ್ರಾಣ, ಅಂತಃಕರಣ, ಜ್ಞಾನೇಂದ್ರಿಯ, 'ಈ ಲಿಂಗವೇ ನಾನು' ( ಇವೆಲ್ಲಕ್ಕೂ ಲಿಂಗವು ಒಡೆಯುನು. ) ಎಂದು ಗುರುವು ಹೇಳಿದನು.

೧ ಪ್ರಮಾಣ

ಜಾಬಾಲದರ್ಶನೋಪನಿಷತ್ ೪ನೆಯ ಖಂಡ ಶ್ಲೋಕ ೬೦—೬೩

ಶಿವಮಾತ್ಮನಿ ಪಶ್ಯಂತಿ ಪ್ರತಿಮಾಸು ನ ಯೋಗಿನಃ|
ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ
ಅಪೂರ್ವ ಮಪರಂ ಬ್ರಹ್ಮ ಸ್ವಾತ್ಮಾನಂ ಸತ್ಯಮದ್ವಯಂ
ಪ್ರಜ್ಞಾನ ಘನಮಾನಂದಂ ಯಃ ಪಶ್ಯತಿ ಸಪಶ್ಯತಿ.
ನಾಡೀ ಪುಂಜಂ ಸದಾಸಾರಂ ನರ ಭಾವಂ ಮಹಾಮುನೇ
ತಮುತ್ಸೃಜ್ಯಾತ್ಮನಾತ್ಮಾನಂ ಅಹಮಿತ್ಯೇವ ಧಾರಯ
ಅಶರೀರಂ ಶರೀರೇಷು ಮಹಂತಂ ವಿಭುಮೀಶ್ವರಂ
ಆನಂದ ಮಕ್ಷರಂ ಸಾಕ್ಷಾ ಮತ್ವಾ ಧೀರೋ ನ ಶೋಚತಿ|
ವಿಭೇದ ಜನಕೇ ಜ್ಞಾನೇ ನಷ್ಟೇ ಜ್ಞಾನ ಬಲಾ ಮುನೇ॥
ಆತ್ಮನೋ ಬ್ರಹ್ಮಣೋ ऽ ಭೇದಂ ಅಸಂತಂ ಕಃ ಕರಿಷ್ಯತಿ||

ಭಾವಾರ್ಥ

ಯೋಗಿಗಳು ಶಿವನನ್ನು ಆತ್ಮದಲ್ಲಿ (ತನ್ನಲ್ಲಿ) ಇರುವವನು ಎಂದು ನೋಡುತ್ತಾರೆ. ಹೊರಗೆ ಇರುವ ಪ್ರತಿಮೆಗಳಲ್ಲಿ ನೋ

ಡ.ವುದಿಲ್ಲ. ಅಜ್ಞಾನವುಳ್ಳ ಜನರಿಗಾಗಿ ಪ್ರತಿಮೆಗಳು ಇರುತ್ತವೆ. ಅಪೂರ್ವವಾದ, (ಮೊದಲಿನದು ಎಂದು ಮಾತ್ರ ತಿಳಿಯಲ್ಪಡದ) ಅಪರವಾದ, (ಅನ್ಯವಲ್ಲದ) ಸತ್ಯವಾದ, (ಯಾವಾಗಲೂ ಇರುವ) ಒಂದೇ ಆದ, ಜ್ಞಾನದಲ್ಲಿ ಘನವೆನಿಸಿಕೊಂಡ ದಾದ, ಆನಂದ ರೂಪವಾದ, ಬ್ರಹ್ಮನ್ನು, ತನ್ನ ಆತ್ಮನನ್ನಾಗಿ ಯಾವನು ತಿಳಿಯುತ್ತಾನೋ ಅವನು ತಿಳಿದವನು.

ಯಾವಗಲೂ ಶರೀರದಲ್ಲಿ ಉತ್ತಮ ಭಾಗವೆನಿಸಿಕೊಂಡ ನಾಡಿಗಳ ಗುಂಪಿಗೆ ಮನುಷ್ಯನ ಅವಯವ ಎಂಬ ಭಾವನೆಯೇನುಂಟೋ ಅದನ್ನು ಬಿಟ್ಟು ಆತ್ಮನನ್ನು ತಾನೇ ಎಂದು ತಿಳಿದು ಆತ್ಮದಿಂದ ಧರಿಸು. (ಇಲ್ಲಿ ಆತ್ಮನನ್ನು ಎಂಬುವದಕ್ಕೆ ಬ್ರಹ್ಮವನ್ನು, ಅಥವಾ ಲಿಂಗವನ್ನು ಎಂತಲೂ ಆತ್ಮನಿಂದ ಎಂಬುದಕ್ಕೆ ತನ್ನರೂಪವಾದ ದೇಹದಲ್ಲಿ ಎಂತಲೂ ಅರ್ಥಮಾಡುವುದು ಸಮಂಜಸವಾಗಿದೆ. ಏಕೆಂದರೆ ಮುಂದಿನ ಶ್ಲೋಕಗಳಿಂದ ಆತ್ಮನಿಗೂ= ತನಗೂ ಬ್ರಹ್ಮನಿಗೂ= ಲಿಂಗಕ್ಕೂ ಭಿನ್ನವಿಲ್ಲವೆಂಬುದು ವ್ಯಕ್ತವಾಗುತ್ತದೆ.)

ಶರೀರವಿಲ್ಲದವನಾದ ಆನಂದ ರೂಪನಾದ ದೊಡ್ಡ ಪ್ರಭುವಾದ ಶಿವನನ್ನು ಸಾಕ್ಷಾತ್ (ಪ್ರತ್ಯಕ್ಷವಾದ ಪ್ರಣವರೂಪವಾದ ಲಿಂಗವನ್ನಾಗಿ) ತಿಳಿದು ಧೀರನು ದುಃಖಪಡುವುದಿಲ್ಲ. ಅದ್ವೈತಜ್ಞಾನವು ಉಂಟಾಗಿ ಅದರ ಬಲದಿಂದ ಭಿನ್ನ ಜ್ಞಾನವು (ದ್ವೈತಭಾವವು) ನಷ್ಟವಾಗಲು ಆತ್ಮನಿಗೂ ಬ್ರಹ್ಮನಿಗೂ (ಲಿಂಗಕ್ಕೂ) ಅಭೇದ ವಿಲ್ಲವೆಂದು ಯಾರು ಸಿದ್ಧಮಾಡಿ ಕೊಡುತ್ತಾರೆ?

೨ ಪ್ರಮಾಣ

ತೇಜೋ ಬಿಂದೂಪನಿಷತ್ ಅಧ್ಯಾಯ ೫ ಶ್ಲೋಕ ೩೦

ಪರಂಬ್ರಹ್ಮಾಹ ಮಸ್ಮೀತಿ ಸ್ಮರಣಸ್ಯ ಮನೋನ ಹಿ
ಬ್ರಹ್ಮಮಾತ್ರಂ ಜಗದಿದಂ ಬ್ರಹ್ಮಮಾತ್ರಂ ತ್ವಮಪ್ಯಹಂ
ಚಿನ್ಮಾತ್ರಂ ಕೇವಲಂ ಚಾಹಂ ನಾಸ್ತ್ಯನಾತ್ಮೇತಿ ನಿಶ್ಚಿನು

ಭಾವಾರ್ಥ

ನಾನು ಪರಬ್ರಹ್ಮನೆಂದು ಸ್ಮರಣ (ನೆನಪು) ಮಾಡುವವನಿಗೆ ಮನಸ್ಸು ಇಲ್ಲ. ಈ ಜಗತ್ತು ಬ್ರಹ್ಮನೇ. ನೀನು ಬ್ರಹ್ಮನೇ ನಾನು ಬ್ರಹ್ಮನೇ (ಲಿಂಗವೇ). ಕೇವಲ ಚಿತ್ ಸ್ವರೂಪನೇ ನಾನಿರುವದರಿಂದ ಅನಾತ್ಮವು ಇಲ್ಲ, ಎಂಬುದಾಗಿ ನಿಶ್ಚಯಿಸು.

ವಿಚಾರ

ಇಂದ್ರಿಯಗಳಲ್ಲಿ ದೇವತೆಗಳನ್ನು ಭಾವಿಸಬೇಕೆಂದು ಸುಬಾಲೋಪನಿಷತ್ ಹೇಳುತ್ತದೆ. ಲಿಂಗವು ಉಂಟೆಂದು ಹೇಳುವುದು ಅದಕ್ಕಿಂತಲೂ ಸೂಕ್ಷ್ಮ ವಿಷಯವಾಗಿದೆ. ಪೂರ್ವಿಕರ ಆಧ್ಯಾತ್ಮ ಭಾವನೆಯು "ಮನುಷ್ಯನು ಕೈಕಾಲು ಮೊದಲಾದ ಅವಯವ ಉಳ್ಳ ಒಂದು ಪ್ರಾಣಿ" ಎಂಬ ಭಾವನೆಯನ್ನು ತಪ್ಪಿಸುವುದೇ ಆಗಿ ಇರುತ್ತದೆ. ಇದೇ ಅವರ ಶ್ರೇಷ್ಠವಾದ ಭಾವನೆ. ಮನುಷ್ಯನ ನಡತೆಯು ಉತ್ತಮಸ್ಥಿತಿಗೆ ಬರುವುದಕ್ಕಾಗಿ ಈ ಭಾವನೆಯು ಅವಶ್ಯಕವು.

---

೧೦೯ ಈ ಲಿಂಗ ತ್ರೈಲಿಂಗ। ಪೇಲಿಂಗ ಷಡುಲಿಂಗ
ಈ ಲಿಂಗ ನವವು—ಛತ್ತೀಸ ಲಿಂಗ ತಾ
ನೀ ಲಿಂಗನೆಂದು ಗುರುಪೇಳ್ದ

ತಾತ್ಪರ್ಯ

"ಈ ಇಷ್ಟಲಿಂಗವೇ ಇಷ್ಟ ಪ್ರಾಣ ಭಾವವೆಂಬ ಮೂರು ಲಿಂಗಗಳು, ಈ ಲಿಂಗವೇ ಆಚಾರ ಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಎಂಬ ಆರುಲಿಂಗಗಳು, ಈ ಲಿಂಗವೇ ಮೊದಲು ಹೇಳಿದ ಮೂರು ಮತ್ತು ಆರು ಲಿಂಗಗಳು ಸೇರಿದ ಒಂಭತ್ತು ಲಿಂಗಗಳು, ಈ ಲಿಂಗವೇ ಈ ಮುಂಚೆ ಹೇಳಿದ ಆರು ಲಿಂಗಗಳಲ್ಲಿ ಒಂದೊಂದರಲ್ಲಿ ಆರಾರರಂತೆ ಮೂವತ್ತಾರು ಲಿಂಗಗಳು, ಹೀಗೆ ತೋರಿರುತ್ತದೆ." ಎಂಬುದಾಗಿ ಗುರುವು ಹೇಳಿದನು.

ಪ್ರಮಾಣ ೧

ಲಿಂಗ ಅಥವಾ ಲಿಂಗಧಾರಣ ಉಪನಿಷತ್

.......ಇಷ್ಟ ಪ್ರಾಣ ಭಾವೇಷು ಲಿಂಗಧಾರಣಂ.......

ಭಾವಾರ್ಥ

ಸ್ಥೂಲ ದೇಹದಲ್ಲಿ ಇಷ್ಟಲಿಂಗವನ್ನೂ ಸೂಕ್ಷ್ಮ ದೇಹದಲ್ಲಿ ಪ್ರಾಣಲಿಂಗವನ್ನೂ ಕಾರಣದೇಹದಲ್ಲಿ ಪರಲಿಂಗವನ್ನೂ ಧರಿಸಬೇಕು.

ಪ್ರಮಾಣ ೨

ಬ್ರಹ್ಮ ವಿದ್ಯೋಪನಿಷತ್ ಶ್ಲೋಕ ೮೦

ಪೂರ್ವಭಾಗೇ ಹ್ಯಧೋಲಿಂಗಂ ಶಿಖಿನ್ಯಾಂ ಚೈವ ಪಶ್ಚಿಮಂ
ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ ಸದಾ ಯತಿಃ

ಭಾವಾರ್ಥ

ದೇಹದ ಮುಂಭಾಗದಲ್ಲಿ ಅಧೋಲಿಂಗವನ್ನೂ (ಇಷ್ಟಲಿಂಗ?) ಶಿಖೆಯಲ್ಲಿ ಪಶ್ಚಿಮಲಿಂಗವನ್ನೂ (ಭಾವಲಿಂಗ?) ಹುಬ್ಬುಗಳ ಮಧ್ಯದಲ್ಲಿ ಜ್ಯೋತಿರ್ಲಿಂಗವನ್ನೂ (ಪ್ರಾಣಲಿಂಗ?) ಯತಿಯು ಯಾವಾಗಲೂ ಧ್ಯಾನಿಸಬೇಕು

೧೧೦ ಈ ಲಿಂಗದ್ವಿಶತದ | ಮೇಲೆ ಷೋಡಶಲಿಂಗ
ವೀಲಿಂಗ ಪಿಂಡ—ಬ್ರಹ್ಮಾಂಡದೊಳಹೊರಗೆ
ಈ ಲಿಂಗ ಪೂರ್ಣವೆಂದೊರೆವ

ತಾತ್ಪರ್ಯ

"ಈ ಲಿಂಗವೇ ಈ ಮುಂಚೆ ಹೇಳಿದ ಒಂಭತ್ತು ಲಿಂಗಗಳು ಒಂದೊಂದು ೨೪ ಭೇದವಾಗಿ ತೋರುವ ೨೧೬ ಲಿಂಗಗಳಾಗಿ ಇದೆ. ಈ ಲಿಂಗವೇ ಪಿಂಡಾಂಡ ಮತ್ತು ಬ್ರಹ್ಮಾಂಡದ ಒಳಗೂ ಹೊರಗೂ ಕೂಡಾ ವ್ಯಾಪಿಸಿರುತ್ತದೆ ಈ ಲಿಂಗವು ಅಖಂಡವಾದುದು, ಎಂದರೆ ಪರಿಪೂರ್ಣ ಲಕ್ಷಣವುಳ್ಳುದು" ಎಂದು ಗುರುವು ಬೋಧಿಸಿದನು.

ಪ್ರಮಾಣ

ಬೃಹಜ್ಜಾಬಾಲೋಪನಿಷತ್ ೭ನೆಯ ಬ್ರಾಹ್ಮಣ

ವಿದೇಹದೇಶದ ರಾಜನಾದ ಜನಕನು ಯಾಜ್ಞವಲ್ಕ್ಯನನ್ನು ಕುರಿತು ಭಸ್ಮಸ್ನಾನದಿಂದ ಏನು ಫಲವಾಗುತ್ತದೆ ಎಂದು ಕೇಳಿದಾಗ ಹೇಳುತ್ತಾನೆ.

ಯಸ್ಯಕಸ್ಯಚಿಚ್ಛರೀರೇ ಯಾವಂತೋ ರೋಮಕೂಪಾಸ್ತಾವಂತಿ ಲಿಂಗಾನಿ ಭೂತ್ವಾ ತಿಷ್ಠಂತಿ ಬ್ರಾಹ್ಮಣೋ ವಾ ಕ್ಷತ್ರಿಯೋ ವಾ ವೈಶ್ಯೋ ವಾ ಶೂದ್ರೋ ವಾ ತದ್‌ಭಸ್ಮಧಾರಣಾದೇತಚ್ಛಿಷ್ಟಸ್ಯ ರೂಪಂ ಯಸ್ಯಾಂ ತಸ್ಯಾಂ ಹ್ಯೇವಾವತಿಷ್ಠತೇ

ಭಾವಾರ್ಥ

ಯಾವನ ಶರೀರದಲ್ಲಿ ಭಸ್ಮಧಾರಣೆಯಾಗಿ ಇರುತ್ತದೋ ಅವನ ರೋಮಕೂಪಗಳೆಲ್ಲಾ ಲಿಂಗಗಳಾಗಿ ಇರುತ್ತವೆ. ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ವೈಶ್ಯನಾಗಲೀ ಶೂದ್ರನಾಗಲೀ ಭಸ್ಮವನ್ನು ಧಾರಣ ಮಾಡಿದರೂ ಈ ವಿಧದ ಅಭಿಪ್ರಾಯದ ರೂಪವುಯಾವಳಲ್ಲಿ ಇದ್ದರೂ ಅವಳಲ್ಲಿಯೂ ಈಸ್ಥಿತಿಆಗುತ್ತದೆ. (ತ್ರಿಪುಂಡ್ರ ಭಸ್ಮವನ್ನು ಧರಿಸಿದರೆ ಈ ಫಲವೆಂದು, ಈ ಉಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತದೆ)

ವಿಚಾರ

ಬೃಹಜ್ಜಾಬಾಲೋಪನಿಷತ್ತಿದಲ್ಲಿ ಐವನೆಯ ಬ್ರಾಹ್ಮಣ ೮ ನೆಯ ಶ್ಲೋಕದಲ್ಲಿ ಭಸ್ಮಧಾರಣಮಾಡಿದವನು ವರ್ಣಾಶ್ರಮಾಚಾರಗಳನ್ನು ಬಿಟ್ಟವನಾದರೂ ಕರ್ಮಗಳನ್ನು ಬಿಟ್ಟವನಾದರೂ ಅವನು ಪೂಜ್ಯನೆಂದು ಹೇಳಲ್ಪಟ್ಟಿರುತ್ತದೆ. ಈ ಮೇಲಿನ ಪ್ರಮಾಣದಿಂದ ಭಸ್ಮಧಾರಣೆಮಾಡಿದವನ ದೇಹದ ರೋಮಕೂಪಗಳೆಲ್ಲಾ ಲಿಂಗಗಳಾಗಿರುತ್ತವೆ, ಎಂಬುದು ವ್ಯಕ್ತಪಡುವುದರಿಂದ ಜನಕರಾಜನ ಕಾಲದಲ್ಲಿಯೂ ದೇಹದಲ್ಲಿ ಲಿಂಗಭಾವನೆಯು ಇದ್ದಿತೆಂದೂ ಇಂತಹ ಸ್ತ್ರೀಪುರುಷರೂ, ಪುರುಷರ ಸಮಾನರೆಂದು ತಿಳಿಯುತ್ತಿದ್ದರೆಂದೂಊಹಿಸಲಿಕ್ಕೆ ಬರುತ್ತದೆ.

---

೧೧೧ ಜಲ ಗಂಧಾಕ್ಷತೆ ಪುಷ್ಪ | ಲಲಿತ ಧೂಪವು ದೀಪ
ವಿಲಸಿತ ನೈವೇದ್ಯ--ತಾಂಬುಲದಿ ತ್ರೈಕಾಲ
ಮಲ ಹರನ ಭಜಿಸು ನೀನೆಂದ

ತಾತ್ಪರ್ಯ

" ನೀನು ಈ ಲಿಂಗವನ್ನು ನೀರು, ಗಂಧ, ಅಕ್ಷತೆ, ಪತ್ರಿ ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ ಎಂಬ ಎಂಟು ವಿಧ ವಸ್ತುಗಳಿಂದ ಅರ್ಚನೆಮಾಡಿ ಮೂರುಕಾಲವೂ ಭಜಿಸು" ಎಂದು ಗುರುವು ಹೇಳಿದನು.

ಪ್ರಮಾಣ

ವೇದಾಂತ ಸಾರೋಪನಿಷತ್

ಏವಂ ವಿದಿತ್ವಾ ಪರಮಾತ್ಮಲಿಂಗಂ ಅತ್ಯಾಶ್ರಮಸ್ಥಾ: ಪರಿಮುಚ್ಯಂತಿ ಸರ್ವೇ | ಪಂಚೋಪಚಾರೈ: ಪರಿವೇಷ್ಟಿತವ್ಯಂ .... ಜನಿಮೃತತ್ ಪ್ರಪೂಜ್ಯ |

ಭಾವಾರ್ಥ

ಪರಮಾತ್ಮನಿಗೆ ಬ್ರಹ್ಮರೂಪವಾದ ಲಿಂಗವನ್ನು ಈ ಮೇರೆಗೆ ತಿಳಿದು ಅತ್ಯಾಶ್ರಮದಲ್ಲಿ ಇರುವವರಾಗಿ ಎಲ್ಲರೂ ಮೋಕ್ಷವನ್ನು ಪಡೆಯುತ್ತಾರೆ. ಈ ಲಿಂಗವು ಪಂಚೋಪಚಾರ (ಅಭಿಷೇಕಧೂಪ ದೀಪ ನೈವೇದ್ಯ ತಾಂಬೂಲ ಈ ಐದು ) ಗಳಿಂದ ಸುತ್ತಲ್ಪಟ್ಟು ಇರತಕ್ಕದ್ದು. .... ಈ ಪ್ರಪಂಚ ಜನನಕ್ಕೆ ಕಾರಣವಾದ ಲಿಂಗವನ್ನು ಪೂಜಿಸಿ ....

ವಿಚಾರ

ಈ ಪೂಜೆ ಮತ್ತೂ ಉಪಚಾರಗಳು ಹೊರಗಿನ ಇಷ್ಟಲಿಂಗಕ್ಕೆ ಸಲ್ಲತಕ್ಕವುಗಳು. ಪ್ರಾಣಲಿಂಗಕ್ಕೆ ಒಳ್ಳೆಯ ನಡತೆಯೇ ಪೂಜಾ ದ್ರವ್ಯಗಳು. ಭಾವಲಿಂಗಕ್ಕೆ ಸರ್ವವೂ ಲಿಂಗಮಯವೆಂದು ಭಾವಿಸಿ ನಿಶ್ಚೆ

೧೧೨ ಇಷ್ಟಲಿಂಗಕೆ ರೂಪ ಪ್ರಾಣಲಿಂಗಕೆ ರುಚಿಯು
ಶ್ರೇಷ್ಠಮಹಲಿಂಗ —ಕರ್ಪಿಸುತ ತೃಪ್ತಿಯನು
ತುಷ್ಟಿಪಡೆ ನೀನು ಸುಖಿಸೆಂದ

ತಾತ್ಪರ್ಯ

ಪದಾರ್ಥಗಳ ರೂಪವನ್ನು ಇಷ್ಟಲಿಂಗಕ್ಕೂ ರುಚಿಯನ್ನು ಪ್ರಾಣಲಿಂಗಕ್ಕೂ ತೃಪ್ತಿಯನ್ನು ಭಾವಲಿಂಗಕ್ಕೂ ಅರ್ಪಿಸುತ್ತಾ ಆಯಾ ಅರ್ಪಣದ ಪ್ರಸಾದದಿಂದ ನೀನು ಸುಖಿಸಿ ಆನಂದವನ್ನು ಹೊಂದು.

ಪ್ರಮಾಣ ಮುಂದೆ ೧೧೪ನೆಯ ಪದ್ಯದಲ್ಲಿ ಇರುತ್ತದೆ.

ವಿಚಾರ

ಪದಾರ್ಥಗಳಲ್ಲಿ ಇರುವ ಮೂರು ವಿಧ ( ರೂಪು ರುಚಿ ತೃಪ್ತಿ ) ಗಳನ್ನು ಲಿಂಗದ ಮೂರು ವಿಧ ( ಇಷ್ಟ ಪ್ರಾಣ ಭಾವಲಿಂಗ ) ಗಳಿಗೆ ಅರ್ಪಿಸಿ ಪಡೆಯುವ ಶುದ್ಧಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧಪ್ರಸಾದಗಳನ್ನು ಭೋಗಿಸಬೇಕು. ಹೀಗೆ ಮಾಡುವುದರಿಂದ ಲೌಕಿಕರ ಭಾವನೆಯಂತೆ ಹಸಿವಿಗೆ ಅನ್ನವನ್ನು ಉಂಡಂತಾಗುವುದಿಲ್ಲ. ಇದು ಕಾಯಾರ್ಪಣವು.

---

೧೧೩ ಅಂಗ ಹಸ್ತವು ಲಿಂಗ । ಮುಖ ಶಕ್ತಿ ಭಕ್ತಿಗಳಿಂ
ಮಾಂಗಲ್ಯದ್ರವ್ಯ —ಗಳ ನಿತ್ತು ಶೇಷವನು
ಲಿಂಗಾಂ'ಗವ'(ಗಿಯು)ರಿದು ಸುಖಿಸೆಂದ

ತಾತ್ಪರ್ಯ

" ನೀನು ಅರ್ಪಿಸತಕ್ಕ ಶುದ್ಧವಾದ ಪದಾರ್ಥಗಳನ್ನು ಅಂಗ, ಹಸ್ತ, ಲಿಂಗ, ಮುಖ, ಶಕ್ತಿ, ಭಕ್ತಿ, ಹೀಗೆ ಈ ಆರು ವಿಧಗಳನ್ನು ತಿಳಿದು ಲಿಂಗಕ್ಕೆ ಅರ್ಪಿಸಿ 'ಲಿಂಗದ ಅಂಗವುಳ್ಳವನೆಂದು' ತಿಳಿದು ಆ ಪ್ರಸಾದವನ್ನು ಭೋಗಿಸು. (ಲಿಂಗಾಂಗಿಯೇ). ಎಂದು ಗುರುವು ಹೇಳಿದನು.

ವಿಚಾರ

ಭಕ್ತಿಮೊದಲಾದ ಆರು ಸ್ಥಲಗಳು ಆರು ಲಿಂಗಗಳು ಉದಾಹರಣೆಗೆ ಭಕ್ತಸ್ಥಲ ಎಂಬ ಅಂಗಕ್ಕೆ ಸುಚಿತ್ತಹಸ್ತ, ಆಚಾರಲಿಂಗ, ಘ್ರಾಣಮುಖ, ಕ್ರಿಯಾಶಕ್ತಿ, ಶ್ರದ್ಧಾಭಕ್ತಿ ಇವುಗಳು ಸಂಬಂಧಗಳೆಂದು ಭಾವಿಸಿ ಪದಾರ್ಥವನ್ನು ಅರ್ಪಿಸಿ ಉಳಿದದ್ದನ್ನು ( ಪ್ರಸಾದವನ್ನು ) ಲಿಂಗದ ಅಂಗ ( ಆಚಾರಲಿಂಗ ) ವನ್ನು ತಿಳಿದು ಅರ್ಪಿಸುತ್ತ ಇದರಂತೆ ಉಳಿದಲಿಂಗಗಳಿಗೂ ಅರ್ಪಿಸುತ್ತಾ ಸುಖಿಸು. ( ಇಲ್ಲಿ ೩೬ ವಿಧದ ಅರ್ಪಣವನ್ನು ಹೇ

ಳಿರುತ್ತಾರೆ. )

---

೧೧೪ ಲಿಂಗಕ್ಕೆ ತೋರದಲೆ ನುಂಗದಿರು ಏನುವನು
ಲಿಂಗಕ್ಕೆ ತೋರಿ—ಸುಖಿಸುತ್ತ ಸರ್ವಾಂಗ
ಲಿಂಗವೆಂದರಿದು ಗಮಿಸೆಂದ

ತಾತ್ಪರ್ಯ

" ಇಷ್ಟಲಿಂಗಕ್ಕೆ ತೋರಿಸಿ ರೂಪವನ್ನು ಅರ್ಪಣಮಾಡದೆ ಏನನ್ನೂ ನುಂಗದಿರು. ( ಪ್ರಾಣಲಿಂಗಕ್ಕೆ ಕೊಡಬೇಡ ). ಇಷ್ಟಲಿಂಗಕ್ಕೆ ರೂಪವನ್ನು ತೋರಿಸಿ ಪ್ರಾಣಲಿಂಗಕ್ಕೆ ರುಚಿಯನ್ನು ಅರ್ಪಿಸಿ ಭಾವಲಿಂಗಾರ್ಪಣದ ಮೂಲಕ ತೃಪ್ತಿಯನ್ನು ಹೊಂದುತ್ತಾ ಸರ್ವಾಂಗವೂ ಲಿಂಗವೇ ಎಂದು ತಿಳಿದು ಈ ಲೋಕದಲ್ಲಿ ವರ್ತಿಸು. " ಎಂದು ಹೇಳಿದನು.

ಪ್ರಮಾಣ

ಪ್ರಸಾದ ಜಾಬಾಲೋಪನಿಷತ್

ಯದ್ಯದ್ವಸ್ತು ಸಮರ್ಪಿತಂ ಲೈಂಗಂ ತತ್ತದೇವ
ಸ್ವಾತ್ಮನಿ ನಿವೇದಯೇತ್
ಯದ್ಯನ್ನಿವೇದಿತಂ ಲಿಂಗಂ ತತ್ತದೇವ ಭುಂಜೀಯಾತ್

ಭಾವಾರ್ಥ

ಯಾವ ಯಾವ ವಸ್ತುವು ಪ್ರಾಣಲಿಂಗಕ್ಕೆ ಸಮರ್ಪಣ ಮಾಡಲ್ಪಡುವದೋ ಆದನ್ನು ತನ್ನ ಆತ್ಮ ಸ್ವರೂಪವಾದ ಇಷ್ಟಲಿಂಗಕ್ಕೆ ನಿವೇದನ ಮಾಡಲ್ಪಡಬೇಕು. ಯಾವದು ಲಿಂಗಕ್ಕೆ ನಿವೇದನ ಮಾಡಲ್ಪಡುವುದೋ ಅದೇ ಭುಂಜಿಸ ( ಅರ್ಪಣ ಮಾಡ )ಲ್ಪಡಬೇಕು.

ಪ್ರಮಾಣ ೨

ತೇಜೋಬಿಂದೂಪನಿಷತ್ ಅಧ್ಯಾಯ ೫ ಶ್ಲೋಕ ೧೭

ಕೇವಲಂ ಬ್ರಹ್ಮಮಾತ್ರತ್ವಾತ್ ನಾಸ್ತ್ಯನಾತ್ಮೇತಿ ನಿಶ್ಚಿನು ‖

ಭಾವಾರ್ಥ

ಕೇವಲ ಬ್ರಹ್ಮವೇ ( ಸರ್ವಂ ಖಲ್ವಿದಂ ಬ್ರಹ್ಮ )ಎಂದು ತಿಳಿವವನಿಗೆ ಅನಾತ್ಮವು ಇಲ್ಲ ಎಂದು ನಿಶ್ಚಯಿಸು. ಎಲ್ಲವೂ ಬ್ರಹ್ಮ ಎಂದು ತಿಳಿವುದೇ ಎಲ್ಲವೂ ಲಿಂಗ ಎಂದು ತಿಳಿವಭಾವನೆಯು. ಈ ಭಾವನೆಯಿಂದಲೇ ಸರ್ವಾಂಗವೂ ಲಿಂಗವಾಗಿ ಇರುತ್ತದೆ.

ವಿಚಾರ (ಮುಂದಿನ ಪುಟದಲ್ಲಿ ಇದೆ-)

ದೇಹ, ಮನ. ಪ್ರಾಣ ( ಭಾವ )ಗಳೆಲ್ಲವೂ ಬ್ರಹ್ಮ ಎಂಬುದರ ಆಚರಣೆಯೇ ಇದು. ಇದೇ ಭಾವಾರ್ಪಣವು.

---

೧೧೫ ವರ ಸು ಚಿತ್ತ ಸು ಬುದ್ಧಿ ನಿರಹಂಕಾರವು ಸುಮನ
ಪರಮ ಸುಜ್ಞಾನ—ಸದ್ಭಾವ ನೆಲೆಗೊಳಲು
ಕರಕೆ ಷಡುಲಿಂಗ ಸಾಧ್ಯವೈ

ತಾತ್ಪರ್ಯ

" ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ ಇವುಗಳು ನಿನ್ನಲ್ಲಿ ನೆಲೆಗೊಂಡರೆ ಇವುಗಳನ್ನೇ ಆರು ಹಸ್ತಗಳೆಂದು ಭಾವಿಸಿ, ಈ ಹಸ್ತಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳನ್ನು ಧರಿಸುವುದಕ್ಕೆ ನಿನಗೆ ಸಾಧ್ಯವಾಗುತ್ತದೆ ಆಗ ನಿನ್ನ ಹಸ್ತದಲ್ಲಿರುವ ಇಷ್ಟ ಲಿಂಗವು ಆರು ಲಿಂಗವುಳ್ಳುದಾಗಿ ಪರಿಣಮಿಸುತ್ತದೆ.'' ಎಂದುಗುರುವು ಹೇಳಿದನು.

ವಿಚಾರ

ಒಳ್ಳೆಯ ನಡತೆಯಿಂದ ಮಹಾದೇವನು ಸಾಧ್ಯನೇ ಹೊರತು ಬರಿಯ ಹೊರಗಿನ ಪೂಜೆಯಿಂದಲಲ್ಲ. ಅಥವಾ ಬರಿಯ ಜ್ಞಾನದಿಂದಲಲ್ಲ.

---

೧೧೬ ಆಧಾರಾದಿ ಬ್ರಹ್ಮರಂಧ್ರ ನವ 'ಶಿ'(ವ) ಳಯದ ಲಿ
ಆದಿ ನವ ಲಿಂಗ—ವಿರುತಿಹವು ಯೋಗದಿಂ
ಭೇದಿಸುತಕೂಡು ನೀನೆಂದ

ತಾತ್ಪರ್ಯ

" ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಬ್ರಹ್ಮ ಶಿಖಾ, ಪಶ್ಚಿಮ ಎಂಬ ಒಂಭತ್ತು ಚಕ್ರಗಳಲ್ಲಿ ಆಚಾರಲಿಂಗ ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಷ್ಕಲ ಲಿಂಗ, ನಿರಂಜನಲಿಂಗ, ನಿಶ್ಶೂನ್ಯಲಿಂಗ ಎಂಬ ಒಂಭತ್ತುಲಿಂಗಗಳಿರುತ್ತವೆ. ಯೋಗದಿಂದ ಇವುಗಳ ಲಕ್ಷಣವನ್ನು ಭೇದಿಸಿ ತಿಳಿಯುತ್ತ ಇವುಗಳೆಲ್ಲವನ್ನೂ ಒಂದಾಗಿ ಮಾಡಿ ನೀನು ಆ ಲಿಂಗದಲ್ಲಿ ಕೂಡು. ಇದೇ ಶಿವಯೋಗವು'' ಎಂದು ಗುರುವು ಹೇಳಿದನು.

ಪ್ರಮಾಣ

ಯೋಗ ಶಿಖೋಪನಿಷತ್ ೧ನೆಯ ಅಧ್ಯಾಯ ಶ್ಲೋಕ ೧೬೭-೧೭೫

ಬಿಂದು ನಾದಂ ಮಹಾಲಿಂಗಂ ಶಿವ ಶಕ್ತಿ ನಿಕೇತನಂ
ಗುದ ಮೇಢ್ರಾಂತರಾಲಸ್ಥಂ ಮೂಲಾಧಾರಂ ತ್ರಿಕೋಣಕಂ
ಶಿವಸ್ಯ ಜೀವ ರೂಪಸ್ಯ ಸ್ಥಾನಂ ತದ್ಧಿ ಪ್ರಚಕ್ಷತೆ
ಸ್ವಾಧಿಷ್ಠಾನಾಹ್ವಯಂ ಚಕ್ರಂ ಲಿಂಗ ಮೂಲೇ ಷಡಸ್ರಕೇ
ನಾಭಿ ದೇಶೇ ಸ್ಥಿತಂ ಚಕ್ರಂ ದಶಾರಂ ಮಣಿಪೂರಕಂ
ದ್ವಾದಶಾರಂ ಮಹಾಚಕ್ರಂ ಹೃದಯೇ ಚಾಪ್ಯನಾಹತಂ
ತದೇತತ್ ಪೂರ್ಣಗಿರ್ಯಾಖ್ಯಂ ಪೀಠಂ ಕಮಲ ಸಂಭವ
ಕಂಠ ಕೂಪೇ ವಿಶುದ್ಧಾಖ್ಯಂ ಯಚ್ಚಕ್ರಂ ಷೋಡಶಾಸ್ರಕಂ
ಪೀಠಂ ಜಾಲಂಧರಂ ನಾಮ ತಿಷ್ಠತ್ಯತ್ರ ಸುರೇಶ್ವರ
ಆಜ್ಞಾನಾಮ ಭ್ರುವೋರ್ಮಧ್ಯೇ ದ್ವಿದಲಂ ಚಕ್ರಮುತ್ತಮಂ
ಉಡ್ಯಾನಾಖ್ಯಂ ಮಹಾಪೀಠಂ ಉಪರಿಷ್ಟಾತ್ ಪ್ರತಿಷ್ಠಿತಂ
ಆದೇ ಉಪನಿಷತ್ ೬ನೆಯ ಅಧ್ಯಾಯ.
ಬ್ರಹ್ಮರಂಧ್ರೇ ಮಹಾಸ್ಥಾನೇ ವರ್ತತೇ ಸತತಂ ಶಿವಾ
ಚಿಚ್ಛಕ್ತಿ: ಪರಮಾದೇವೀ ಮಧ್ಯಮೇ ಸುಪ್ರತಿಷ್ಠಿತಾ

ಭಾವಾರ್ಥ

ಮಹೇಶ್ವರನು ಬ್ರಹ್ಮನಿಗೆ ಹೇಳುತ್ತಾನೆ:—

ಶಿವ ಮತ್ತು ಶಕ್ತಿ ಇವರಿಬ್ಬರಿಗೆ ವಾಸಸ್ಥಾನವಾದ ಮಹಾಲಿಂಗವು ಬಿಂದುನಾದಗಳಿಂದ ಕೂಡಿದುದು ( ಇಲ್ಲಿ ಬಿಂದ ವೇ ಶಕ್ತಿಯು ನಾದವೇ ಶಿವನು)ಗುದ ಮತ್ತು ಮೇಢ್ರ ಇವೆರಡರ ನಡುವೆ ಇರುವುದು ಮೂಲಾಧಾರ ಚಕ್ರವು. ಇದು ಶಿವನು ಜೀವನ ರೂಪದಲ್ಲಿ ಇರುವ ಸ್ಥಾನ, ಲಿಂಗದ ಬುಡದಲ್ಲಿ ಇರುವುದು ಸ್ವಾಧಿಷ್ಠಾನ ಚಕ್ರ, ನಾಭಿಯ ಸ್ಥಳದಲ್ಲಿ ಇರುವುದು ಮಣಿಪೂರಕಚಕ್ರ, ಹೃದಯ (ಎದೆ) ದಲ್ಲಿ ಇರುವುದು ಅನಾಹತ ಚಕ್ರ, ಕಂಠದಲ್ಲಿ ಇರುವುದು ವಿಶುದ್ಧಿಚಕ್ರ ಭ್ರೂಮಧ್ಯದಲ್ಲಿಇರುವುದು ಆಜ್ಞಾ ಚಕ್ರ ಬ್ರಹ್ಮರಂಧ್ರದಲ್ಲಿ ಇರುವುದುಪರಮಶಕ್ತಿ....

ವಿಚಾರ

ಇವೇ ಚಕ್ರಗಳನ್ನೇ ವೀರಶೈವರು ಮಾನಿಸುತ್ತಾರೆ ಮತ್ತು ಇವುಗಳ ಮಧ್ಯದಲ್ಲಿ ಲಿಂಗವು ಉಂಟೆಂದು ತಿಳಿಯುತ್ತಾರೆ. ಶಿವಶಕ್ತಿಗಳನ್ನುಳ್ಳ ಮಹಾಲಿಂಗವು ಭ್ರೂ ಮಧ್ಯದಲ್ಲಿ ಇರುವುದೆಂದೂ ತಿಳಿಯುತ್ತಾರೆ. ಈ ಮಹಾಲಿಂಗದ ವಿಷಯವು ಮೇಲೆ ಉಪನಿಷತ್ತಿನಲ್ಲಿ ಬಂದಿರುವುದರಿಂದ ಲಿಂಗ ಭಾವನೆಯು ಬಹಳ ಪೂರ್ವದಿಂದಲೂ ಇದ್ದಿತೆಂದು ಗೊತ್ತಾಗುತ್ತದೆ.

೧೧೭ ಒಂದೆರಡು ಮೂರಾರು| ಮುಂಬೆ ಮೂವತ್ತಾರ
ರಿಂದೆ ಇನ್ನೂರ—ಹದಿನಾರು ಸ್ಥಲ ಕುಳ ತಾ
ನೊಂದೆ ಪರಬ್ರಹ್ಮವಹುದೆಂದ

ಒಂದೇ ಪರಬ್ರಹ್ಮ(ಲಿಂಗ)ವು ತಾನೊಂದೇಅಂಗ ಲಿಂಗವೆಂಬದು ಎರಡಾಗಿ, ಇಷ್ಟ ಪ್ರಾಣ ಭಾವವೆಂಬ ಮೂರಾಗಿ, ಅಥವಾ ಗುರು ಲಿಂಗ ಜಂಗಮ ಎಂಬ ಮೂರು ವಸ್ತುಗಳಾಗಿ, ಆಚಾರಾದಿ ಆರು ಲಿಂಗಗಳಾಗಿ, ಈ ಆರರಲ್ಲಿ ಒಂದೊಂದರಂತೆ ಮೂವತ್ತಾರಾಗಿ, ಒಂಬತ್ತು ಲಿಂಗಗಳು ಒಂದೊಂದು ೨೪ ರಂತೆ ೨೧೬ ಭೇದಗಳಾಗಿ ಸ್ಥಲ ಮತ್ತು ಕುಳ (ಲಿಂಗ ಮತ್ತು ಅಂಗ)ಗಳು ಆಗಿ ಇರುತ್ತದೆ.

ಪ್ರಮಾಣ ೧
ವೇದಾಂತ ಸಾರೋಪನಿಷತ್

ಯದೇಕಂ ಲಿಂಗಂ ಬಹುಧಾ ಶಕ್ತಿಯೋಗಾತ್
ಭಿನ್ನಾ ಯಥಾ ಕಿರಣಾ: ಸೂರ್ಯಬಿಂಬಾತ್ ಭಿನ್ನಾ ತಥಾ

ಭಾವಾರ್ಥ

ಒಂದೇ ಆದ ಲಿಂಗವು ಅನೇಕವಿಭಗಳಾದ ಶಕ್ತಿಗಳ ಯೋಗದಿಂದ ಅನೇಕವಾಗಿ ತೋರುತ್ತದೆ. ಒಂದೇ ಆದ ಸೂರ್ಯಬಿಂಬದಿಂದ ಅನೇಕ ಕಿರಣಗಳು ಭಿನ್ನ ಭಿನ್ನವಾಗಿ ತೋರುವಹಾಗೆ.

ಪ್ರಮಾಣ ೨
ಮಹೋಪನಿಷತ್ ೫ನೆಯ ಅಧ್ಯಾಯ.

ಬ್ರಹ್ಮಣಾ ಕಲ್ಪಿತಾಕಾರಾ ಲಕ್ಷಶೋಽಪ್ಯಥ ಕೋಟಿಶ:
ಸಂಖ್ಯಾತೀತಾಃ ಪುರಾಜಾತಾ ಜಾಯಂತೇದ್ಯಾಪಿ ಚಾಭಿತ:

ಭಾವಾರ್ಥ

ಬ್ರಹ್ಮನಿಂದ ಉಂಟು ಮಾಡಲ್ಪಟ್ಟ (ಕಾರಣರೂಪದಿಂದ ಆದ) ಅನೇಕ ಆಕಾರಗಳು ಲಕ್ಷಗಟ್ಟಲೆ ಅಥವಾ ಕೋಟಿಗಟ್ಟಲೆ ಅದರ ಸಂಖ್ಯೆಮಾಡಲಿಕ್ಕೆ ಆಗದಂತೆ ಇವೆ. ಇವು ಪೂರ್ವದಲ್ಲಿ ಆದವುಗಳು, ಈಗಲೂಆಗುತ್ತಿರುವವುಗಳು ಮುಂದೂ ಆಗುವವುಗಳು. (ಮುಂದೆ ೧೨೫ನೆಯ ಪದ್ಯದಲ್ಲಿ ಕಠೋಪನಿಷತ್ತಿನ ಪ್ರಮಾಣವು ಹೇಳಲ್ಪಟ್ಟಿದೆ.)

ವಿಚಾರ

ಪರಬ್ರಹ್ಮನ ರೂಪಭೇದಗಳೇ ಈ ಭೇದಗಳು. ಅನೇಕ ಬಣ್ಣದ ಸೂರ್ಯನಕಿರಣಗಳು ಕಡೆಯಲ್ಲಿ ಸೂರ್ಯನಲ್ಲಿಯೇ ಕೂಡುವಂತೆ ಈ ಎಲ್ಲಾ

ಭೇದಗಳೂ ಒಬ್ಬನೇ ಪರಬ್ರಹ್ಮನಲ್ಲಿ ಕೂಡುತ್ತವೆ. ಲೋಕದಲ್ಲಿನ ವ್ಯವಹಾರಕ್ಕಾಗಿ ಈ ಭೇದಗಳನ್ನು ಮಾನಿಸಬೇಕಾದುದು ಅತ್ಯವಶ್ಯಕವಾಗಿದೆ. (ಲಿಂಗ ಶಬ್ದಕ್ಕೆ ಪರಬ್ರಹ್ಮ ಎಂಬ ಪದವನ್ನು ಈ ಗ್ರಂಥಕರ್ತರೇ ಇಲ್ಲಿ ಉಪಯೋಗಿಸಿ ಇರುವುದು ಗಮನದಲ್ಲಿ ಇಡತಕ್ಕ ಸಂಗತಿಯಾಗಿದೆ)

---

೧೧೮ ಇಂತೆಂದು ಗುರು ಪೇಳೆ | ಸಂತಸದಿ ಕೈಕೊಂಡು
ಶಾಂತ ಸದ್ಗುರುವೆ--ಭಕ್ತಾದ್ಯೈಕ್ಯಾಂತವನು
ಇಂತೆಂಬುದೆನಗೆ ತಿಳುಹೆಂದ

ತಾತ್ಪರ್ಯ

ಹೀಗೆ ಗುರುವು ಹೇಳಲು ಸಂತೋಷದಿಂದ ಅಂಗೀಕರಿಸಿ ಶಾಂತನಾದ ಸದ್ಗುರುವೇ, ಭಕ್ತಸ್ಥಲ ಮೊದಲಾಗಿ ಐಕ್ಯಸ್ಥಲ ಕಡೆಯಾದ ಆರು ಸ್ಥಲಗಳು ಹೇಗೆ ಇರುತ್ತವೆ? ಎಂಬುದನ್ನು ನನಗೆ ತಿಳುಹಿಸಿರಿ ಎಂದು ಕೇಳಿದನು.

---

೧೧೯ ಸತ್ಯದಲ್ಲಿ ನಡೆವುತ್ತ | ಭಕ್ತಿ ಶಿವಲಿಂಗದಲಿ
ಮತ್ತೆ ಗುರು ಚರವ—ಶಿವನೆಂದು ನಂಬಿ ತಾ
ಭಕ್ತಿಯಂ ಮಾಡಲವ ಭಕ್ತ

ತಾತ್ಪರ್ಯ

ಸತ್ಯದಲ್ಲಿ ( ಯಾವಾಗಲೂ ಇರುವ ಮಹದೇವನಲ್ಲಿ ) ಕೂಡಿ ಕೆಲಸ ಮಾಡುತ್ತಾ ಶಿವಲಿಂಗ ( ಇಷ್ಟಲಿಂಗ ) ದಲ್ಲಿ ಭಕ್ತಿಯನ್ನು ಮಾಡಿ ಮತ್ತು ಗುರು ಜಂಗಮರನ್ನೂ ಶಿವನೆಂಬದಾಗಿ ನಂಬಿ ಭಕ್ತಿಯನ್ನು ಮಾಡಲು ಅವನು ಭಕ್ತನೆನಿಸಿಕೊಳ್ಳುತ್ತಾನೆ. ಇಂತಹ ಭಕ್ತಿಗೆ ಸದ್‌ಭಕ್ತಿ ಎಂದೂ ಶ್ರದ್ಧಾಭಕ್ತಿ ಎಂದೂ ಕರೆಯುತ್ತಾರೆ.

ಪ್ರಮಾಣ ೧

ಭಕ್ತಿಯೋಗೋಪನಿಷತ್

ಅಥ ಪರಮಶಿವಲಿಂಗಾಂಗ ಸಾಮರಸ್ಯ ಭಕ್ತಿಯೋಗಂ ವ್ಯಾಖ್ಯಾಸ್ಯಾಮಃ ....ಶಿವಃ ಪ್ರಾಣಲಿಂಗಃ ಶಿವಭಕ್ತಸ್ಯ ಸೇವಾ ಶಿವಪ್ರಸಂಗೇ ಮತಿರಸ್ಯ ಸರ್ವದಾ ಶಿವಪ್ರಸಾದಸ್ಯ ಧೃತಿರ್ನಿರಂತರಂ ... ಪರೋಪಕಾರಂ ಶಿವಕಾರ್ಯಂ ವಿಚಿನ್ತ್ಯೈತ್

ಭಾವಾರ್ಥ

ಶ್ರೇಷ್ಠವಾದ ಶಿವಲಿಂಗ ಮತ್ತು ಅಂಗದ ಕೂಡುವಿಕೆಯು

ಳ್ಳು ಭಕ್ತಿಯೋಗವನ್ನು ಹೇಳುತ್ತೇನೆ ... ಶಿವನೇ ಪ್ರಾಣವು ಶಿವ ಭಕ್ತನ ಸೇವೆಯಲ್ಲಿ ಶಿವನ ವಿಷಯದ ಮಾತುಕಥೆಯಲ್ಲಿ ಯಾವಾಗಲೂ ಬುದ್ಧಿ, ಯಾವಾಗಲೂ ಶಿವನ ಪ್ರಸಾದವನ್ನು ಸೇವಿಸುವ ಧೈರ್ಯ, ಇವು ಇರಬೇಕು. ....ಪರೋಪಕಾರವನ್ನು ಶಿವಕಾರ್ಯವೆಂದು ಚಿಂತಿಸಬೇಕು.

ಪ್ರಮಾಣ ೩

ಋಗ್ವೇದೋಪನಿಷತ್

....... ಶಿವ ಏವಗುರು: ಗುರುದೇವಶ್ಶಿವ: | ಶಿವಏವ ಲಿಂಗಂ ಉಭಯೋರ್ಮಿಶ್ರ ಪ್ರಕಾಶತ್ವಾತ್ | ಪ್ರಾಣತ್ವಂ ಮಹೇಶ್ವರ:...... ಶಿವಗುರು ಸ್ವರೂಪೋ ಮಹೇಶ್ವರ:.. ತಸ್ಮಾತ್ ಮಾಹೇಶ್ವರಾತ್ ಪರಂನಾಸ್ತಿ .... (ಈ ಉಪನಿಷತ್ತು ಕೆಳದಿ ಸಂಸ್ಥಾನ ಹಿರಿಯಮಠದಲ್ಲಿ ಇದ್ದ ಬರಹದ ಪ್ರತಿ)

ಭಾವಾರ್ಥ

ಶಿವನೇ ಗುರುವು, ಗುರುದೇವನೇ ಶಿವನು. ಶಿವನೇ ಲಿಂಗವು. ಗುರು ಮತ್ತು ಲಿಂಗ ಈ ಇಬ್ಬರೂ ಸೇರಿ ಲಿಂಗದ ಪ್ರಕಾಶವಾಗುವುದರಿಂದ ಇವರಿಬ್ಬರ ಪ್ರಾಣರೂಪವಾಗಿ ಮಹೇಶ್ವರನು. ಶಿವ ಗುರು ಇವರಿಬ್ಬರ ಸ್ವರೂಪವೂ ಮಹೇಶ್ವರನು. ಆದುದರಿಂದ ಮಹೇಶ್ವರನಿಗಿಂತ ಹೆಚ್ಚಿನವರು ಯಾರೂ ಇಲ್ಲ (ಇಲ್ಲಿ ಮಹೇಶ್ವರ ಎಂಬ ಪದವನ್ನು ಅಷ್ಟಾವರಣದಲ್ಲಿ ಇರುವ 'ಜಂಗಮ' ಎಂಬುದಕ್ಕಾಗಿ ಉಪಯೋಗಿಸಿ ಇರುತ್ತಾರೆ, ಎಂದು ತಿಳಿದು ಬರುತ್ತದೆ. ಮಹೇಶ್ವರ ಅಥವಾ ವೀರಮಾಹೇಶ್ವರ ಎಂಬ ಪದವನ್ನು ಜಂಗಮಕ್ಕೆ ಶಿವಾಗಮಗಳಲ್ಲಿಯೂ ಉಪಯೋಗಿಸಿ ಇರುತ್ತಾರೆ.)

ವಿಚಾರ

ಪರಬ್ರಹ್ಮನ ನಿಷ್ಕಲರೂಪವೇ ಜಂಗಮವಾಗಿಯೂ ಸಕಲನಿಷ್ಕಲರೂಪವೇ ಗುರುವಾಗಿಯೂ ಸಕಲವೇ ಲಿಂಗವಾಗಿಯೂ ಭಕ್ತನಿಗೆ ಕೊಡಲ್ಪಟ್ಟಿರುತ್ತದೆ. ಇವರಲ್ಲಿ ಶ್ರದ್ಧೆಯುಳ್ಳುದೇ ಭಕ್ತಸ್ಥಲವು.

---

೧೨೦ ಪರಧನ ಪರಸತಿಯರ್ಗೆ | 'ಹರಿಯದಲೆ' (ಎರಗದಲೆ)ಶಿವನಿಷ್ಠೆ
ಕಂಗೊಂಡು ಲಿಂಗ—ವಲ್ಲದನ್ಯವನರಿಯ
ದಿರವೆ ಮಾಹೇಶ ಸ್ಥಲವೆನಿಕು.

ತಾತ್ಪರ್ಯ

ಅನ್ಯರ ದ್ರವ್ಯ, ಅನ್ಯರ ಹೆಂಡಿರಿಗೆ ಮನಸ್ಸುಮಾಡದೆ ಶಿವನ (ಗು

ರುಲಿಂಗ ಜಂಗಮರ) ಹೊರತಾಗಿ ನನಗೆ ಬೇರೆ ಯಾರೂ ರಕ್ಷಕರಿಲ್ಲವೆಂದು ನಂಬುಗೆಯು ಬಲವಾಗಿ ನಿಂತುಕೊಂಡು ( ಶಿವನನಿಷ್ಠೆಯು ಕರಿಗೊಂಡು) ಈ ಮೂರು ಲಿಂಗಗಳ ಹೊರತಾಗಿ ಮತ್ತೊಂದನ್ನೂ ಅರಿಯದೆ ಇದ್ದ ಸ್ಥಿತಿಯೇ ಮಾಹೇಶ್ವರ ಸ್ಥಲವು.

ಪ್ರಮಾಣ

ಈಶಾವಾಸ್ಯೋಪನಿಷತ್

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿಜ್ಜಗತ್ಯಾಂ ಜಗತ್
ತೇನತ್ಯಕ್ತೇನ ಭುಂಜೀಥಾ: ಮಾ ಗೃಧ: ಕಸ್ಯಚಿತ್‌ಧನಂ

ಈ ಜಗತ್ತು ಸರ್ವವೂ ಈಶ ( ಪರಬ್ರಹ್ಮ) ನಿಂದ ವ್ಯಾಪಿಸಲ್ಪಟ್ಟದು. ಆ ಪರಬ್ರಹ್ಮನ ಎಂದರೆ ಲಿಂಗದ ಜಗತಿ ಎಂಬ ವರ್ತುಳದ ಭಾಗದಲ್ಲಿ ಈ ಭೂಮಿ ಇರುತ್ತದೆ ಅವನಿಂದ ಬಿಡಲ್ಪಟ್ಟ ಶೇಷ ( ಪ್ರಸಾದ ) ದಿಂದ ನೀವು ತೃಪ್ತಿಹೊಂದಿರಿ. ಇನ್ನೊಬ್ಬರ ಧನವನ್ನು ಗ್ರಹಿಸಬೇಡಿರಿ.

ವಿಚಾರ

ಇನ್ನೊಬ್ಬರ ಪದಾರ್ಥವನ್ನು ಮುಟ್ಟದೆ ಲಿಂಗಪ್ರಸಾದ ಗ್ರಾಹಕನೇ ಮಹೇಶ್ವರನು.

---

೧೨೧ ಅರ್ಪಿತಾನರ್ಪಿತದ | 'ಒಪ್ಪವನು'(ತಪ್ಪದಲೆ) ತಿಳಿಯುತ್ತ
ಅರ್ಪಿತವ ಗ್ರಹಿಸಿ—ಅನರ್ಪಿತ ವರ್ಜನೆಯ
ಲಿಪ್ಪಾತನಪ್ಪ ಪ್ರಾಸಾದಿ

ತಾತ್ಪರ್ಯ

ಇದು ಅರ್ಪಿತ, ಇದು ಅನರ್ಪಿತ, ಎಂಬುದರ ಸ್ಥಿತಿಗಳನ್ನು ಕ್ರಮತಪ್ಪದೆ ತಿಳಿಯುತ್ತಾ, ಅರ್ಪಿತವೆನಿಸಿಕೊಂಡದ್ದನ್ನು ಗ್ರಹಿಸಿ ಅನರ್ಪಿತವೆನಿಸಿಕೊಂಡುದನ್ನು ಬಿಡುವ ಒಪ್ಪಿಗೆಯುಳ್ಳವನಾಗಿರುವುದೇ ಪ್ರಸಾದಿಸ್ಥಲ.

( ಯಾವುದು ಶಿವನಿಗೆ= ಲಿಂಗಕ್ಕೆ ಅರ್ಪಿತವೋ ಅದನ್ನೇ ತಾನು ಅರ್ಪಿಸಬೇಕು. ಇದೇ ಅರ್ಪಿತವು. ಶಿವನಿಗೆ ಯಾವುದು ಅರ್ಪಿತವಲ್ಲವೋ ಅದು ಅನರ್ಪಿತ. ಇದನ್ನು ಬಿಡಬೇಕು. )

ಪ್ರಮಾಣ

ಇದಕ್ಕೆ ೧೧೪ ನೆಯ ಪದ್ಯದಲ್ಲಿ ಪ್ರಮಾಣವಿದೆ. ಮತ್ತು ....

ರುದ್ರ ಪೀತಂ ಪಿಬೇತ್ ..... ಎಂಬ ವೇದದ ಪ್ರಮಾಣವೂ ಇದೆ.

ವಿಚಾರ

ಇದು ಅರ್ಪಿಸತಕ್ಕುದು, ಇದು ಅರ್ಪಿಸತಕ್ಕುದಲ್ಲ, ಎಂಬುದನ್ನು ವಿಚಾರ ಮಾಡಿ ವಿಶುದ್ಧ ಪದಾರ್ಥಗಳನ್ನೇ ಅರ್ಪಿಸಿ ಪ್ರಸಾದ ಪಡೆಯಬೇಕು. ಮಾದಕ, ಪ್ರಾಣಿಹಿಂಸಾತ್ಮಕ, ಪ್ರಾಣಿಹತ, ಭವಿ ಮುಟ್ಟಿದುದು, ಇವುಗಳು ಅಶುದ್ಧ ಪದಾರ್ಥಗಳೆಂದು ಕೆಲವು ಕಡೆ ಲೇಖನವುಂಟು.

---

೧೬೨ ಪ್ರಾಣವಾಯ್ವಿಂದ್ರಿಯವ | ಮಾಣಿಸಿ ಜ್ಞಾನೇಂದ್ರಿಯ
ಪ್ರಾಣವನು ಲಿಂಗ—ದೊಳು ಕೂಡಿ ಸುಖಿಸುವ
ಜಾಣರಿಗೆ ಜಾಣನಸುಲಿಂಗಿ

ತಾತ್ಪರ್ಯ

ಪ್ರಾಣವಾಯುವಿನ ಚಲನೆಯಪ್ರಕಾರವಾಗಿ ಪ್ರಾಪಂಚಿಕ ಇಚ್ಛೆಗೆ ಹೋಗುವ ಇಂದ್ರಿಯುಗಳ ಅಂಥಾ ಕಾರ್ಯಗಳನ್ನು ತಪ್ಪಿಸುತ್ತಾ ಇಂದ್ರಿಯಗಳನ್ನೂ ಪ್ರಾಣವನ್ನೂ ಲಿಂಗದೊಳಗೆ ಕೂಡಿಸಿ ಸುಖಿಸುತ್ತಿರುವವನೇ ಜಾಣರಲ್ಲಿ ಜಾಣ (ಬಹಳ ಜಾಣ)ನಾದ ಪ್ರಾಣಲಿಂಗಿಯು.

ಪ್ರಮಾಣ

ರುದ್ರೋಪನಿಷತ್

(ಶಿರಾಳಕೊಪ್ಪದ ಶೀಲವಂತ ಮಠದ ಮಹಲಿಂಗಯ್ಯನವರಲ್ಲಿ ದೊರೆತ ಪ್ರತಿ.)

....ತಸ್ಮಾತ್ ಪ್ರಾಣಲಿಂಗೀ ಶಿವಃ ಶಿವ ಏವಪ್ರಾಣಲಿಂಗೀ....
ಪ್ರಾಣಲಿಂಗೀ ಶಿವರೂಪಃ | ಶಿವ ರೂಪಃ ಪ್ರಾಣಲಿಂಗೀ....

ಭಾವಾರ್ಥ

ಆದುದರಿಂದ ಪ್ರಾಣಲಿಂಗಿಯು ಶಿವನು, ಶಿವನೇ ಪ್ರಾಣಲಿಂಗಿಯು, ಪ್ರಾಣಲಿಂಗಿಯು ಶಿವರೂಪನು, ಶಿವರೂಪನು ಪ್ರಾಣಲಿಂಗಿಯು.

ವಿಚಾರ

ವಾಯುಪ್ರಾಣಿಯಾಗದೆ ಲಿಂಗಪ್ರಾಣಿಯಾಗುವುದೇ ಪ್ರಾಣಲಿಂಗಿ ಸ್ಥಲವು.

---

೧೬೩ ಕರಣೇಂದ್ರಿಯಾದಿಗಳ | ಸ್ಮರಣೆಯನ್ನಳಿಗಳೆದು
ಶರಣ ಸತಿ ಲಿಂಗ—ಪತಿಯಾಗಿ ಚರಿಸುತಿಹ
ಪರಮನೇ ಶರಣನೆಂದೆನಿಪ

ತಾತ್ಪರ್ಯ

ಚಿತ್ತ ಬುದ್ಧಿ ಮೊದಲಾದ ಕರಣಗಳ ಮತ್ತು ಕಣ್ಣು ಕಿವಿಯೆ

ನೊದಲಾದ ಜ್ಞಾನೇಂದ್ರಿಯುಗಳ ಸ್ಮರಣೆ ( ಈ ಅಂತಕರಣಗಳು ಮತ್ತು ಇಂದ್ರಿಯಗಳು ತನಗೆ ಉಂಟೆಂಬ ನೆನಪು ಹೊಂದಿರುವಿಕೆ ) ಯನ್ನು ಧಿಕ್ಕಾರಮಾಡಿ ( ಬಿಟ್ಟು ) ತಾನೇ (ಶರಣನೇ) ಸತಿ, ಲಿಂಗವೇ ಪತಿ ಎಂದು ತಿಳಿದು ಪತಿವ್ರತಾಸ್ತ್ರೀಯು ಗಂಡನನ್ನು ಬಿಟ್ಟು ಯಾವ ಸೌಖ್ಯವನ್ನೂ ಹೊಂದದೆ ಇರುವಂತೆ ಲಿಂಗವನ್ನು ಬಿಟ್ಟು ಯಾವ ಸೌಖ್ಯವನ್ನೂ ಹೊಂದದೇ ಇರುವಂಥಾ ಶ್ರೇಷ್ಠನೇ ಶರಣಸ್ಥಲದವನು.

ವಿಚಾರ

ಗಂಡನಕಾರ್ಯವೇ ಎಂಬುದಾಗಿ ಹೆಂಡತಿಯು ಮನೆಯ ಕೆಲಸಗಳನ್ನೆಲ್ಲಾ ಮಾಡುವಂತೆ ಶರಣನು ಲಿಂಗದ ಕಾರ್ಯವನ್ನಾಗಿ ತನ್ನ ಸತ್ಕ್ರಿಯೆಗಳನ್ನು ನಡೆಸಬೇಕು.

---

೧೨೪ ಆರೂರ್ಮಿ ವರ್ಗವನು | ಆರೆರಡು ಪೂಜೆಯನು
ಕೋರದಲೆ ಲಿಂಗ--ದೊಳು ಕೂಡಿಸಿ ಶಿಖಿ ಕ
ರ್ಪೂರಯೋಗದಂತೆ ಲಿಂಗೈಕ್ಯ.

ತಾತ್ಪರ್ಯ

ಹಸಿವು, ನೀರಡಿಕೆ, ಶೋಕ, ಮೋಹ, ಜನನ, ಮರಣ, ಎಂಬ ಆರು ಊರ್ಮಿ ( ಸಂಸಾರದ ಸಾಗರದ ತೆರೆ) ಗಳನ್ನೂ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಎಂಬ ಆರು ಅರಿವರ್ಗಗಳನ್ನೂ ಬಿಟ್ಟು ಆರು ಮತ್ತು ಎರಡು ಕೂಡಿದ ಎಂಟು ವಿಧದ ಪೂಜೆ (ಅಷ್ಟವಿಧಾರ್ಚನೆ) ಮಾಡಿದರೆ ಸಾಕೆಂಬು ಭಾವಿಸದೆ, ಯಾವಾಗಲೂ ಲಿಂಗದೊಳಗೆ ಅಂಗವನ್ನು ಕೂಡಿಸಿ ಉರಿಯೊಳಗೆ ಕೂಡಿದ ಕರ್ಪೂರವು ಹೇಗೆ ತನ್ನ ಕರ್ಪೂರವೆಂಬ ಭಾವನೆಯನ್ನು ಕಳೆದುಕೊಂಡು ಉರಿಯೇ ಆಗಿರುವುದೋ ಹಾಗೆ ತಾನು ಮನುಷ್ಯನೆಂಬ ಭಾವನೆಯನ್ನು ಕಳೆದುಕೊಂಡು ಲಿಂಗವೇಆಗಿರುವವನು ಐಕ್ಯನು.

ವಿಚಾರ

ಈ ಐಕ್ಯ ಸ್ಥಲವೇ ಸಹಜಯೋಗವು.

ಕೆಲವರು ಶೀತ, ಉಷ್ಣ, ಸುಖ, ದುಃಖ, ಮಾನ, ಅವಮಾನ ಇವುಗಳನ್ನು ಷಡೂರ್ಮಿಗಳೆಂದು ಹೇಳುತ್ತಾರೆ.

---

೧೨೫ ಆರಾರು ಸ್ಥಲದಲ್ಲಿ | ಆರಾರು ಸ್ಥಲವಿಹುದು
ಆರು ಹದಿನಾರು— ದ್ವಿಶತದ ನೊಂದಕೊಳು

ಧೀರ ತಿಳಿ ಎಂದು ಗುರು ಪೇಳ್ವ

## ತಾತ್ಪರ್ಯ

ಧೀರನೇ, ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ,ಎಂಬ ಈ ಆರುಸ್ಥಲಗಳ ಒಂದೊಂದು ಸ್ಥಲದಲ್ಲಿ ಭಕ್ತನಭಕ್ತ, ಭಕ್ತನ ಮಾಹೇಶ್ವರ ಎಂಬಂತೆ ಆರಾರು(೩೬)ಸ್ಥಲಗಳಾಗಿ ಇರುವವು. ಇವೇ ಆರು ೩೬ ಸ್ಥಲಗಳಾಗಿರುವವು. ಇವಷ್ಟು ಒಂದೇ ಎಂಬುದಾಗಿ ತಿಳಿ, (ಲಿಂಗದಲ್ಲಿಯೇ ಭಾವಿಸು)ಎಂಬುದಾಗಿ ಗುರುವು ಹೇಳಿದನು

ಪ್ರಮಾಣ: ಕಠೋಪನಿಷತ್ ೨ನೆಯ ಅಧ್ಯಾಯ.

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ಬೀಜಂ ಬಹುಧಾ ಯ: ಕರೋತಿ॥ ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋವಿದಧಾತಿ ಕಾಮಾನ್ ॥ ತಮಾತ್ಮಸ್ಥಂ ಯೇನು ಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ

## ಭಾವಾರ್ಥ

ಒಬ್ಬನಾದ ಮಹಾದೇವನು ಸರ್ವಭೂತಗಳ ಒಳಗಿನ ಆತ್ಮರೂಪನಾಗಿ, ಅವುಗಳೆಲ್ಲವನ್ನೂ ವಶಪಡಿಸಿಕೊಂಡವನಾಗಿ ಇದ್ದಾನೆ. ಒಂದೇ ಮೂಲ ವಸ್ತುವನ್ನು ಅನೇಕವಾಗಿ ಯಾವನು ಮಾಡುತ್ತಾನೋ ಆ ಮಹಾದೇವನನ್ನು ಆತ್ಮನಲ್ಲಿ ಇರುವವನೆಂದು ಯಾರು ತಿಳಿಯುವರೋ ಅವರೇ ಧೀರರು. ಅವರ ಸುಖವೇ ಶಾಶ್ವತವಾದುದ . ಉಳಿದವರದು ಅಲ್ಲ.

ಕೇಡಿಲ್ಲದವರಲ್ಲಿ ಕೇಡಿಲ್ಲದವನಾಗಿಯೂ ಚೈತನ್ಯ (ಕಲೆ=ಜೀವವಾಗಿ ತೋರುವಿಕೆ)ಉಳ್ಳವರಲ್ಲಿ ಚೈತನ್ಯನಾಗಿಯೂ ಇದ್ದು ಅನೇಕ ಪ್ರಾಣಿಗಳ ಕಾಮ ( ಇಚ್ಛೆಯ ಕಾರ್ಯ ) ಗಳನ್ನು ಯಾವನು ವಿಧಿಸುವನೋ ಆ ಮಹಾದೇವನನ್ನು ಆತ್ಮದಲ್ಲಿ ( ತನ್ನಲ್ಲಿ ) ಇರುವವನೆಂದು ಯಾರು ತಿಳಿಯುವರೋ ಅವರೇ ಧೀರರು. ಅವರ ಶಾಂತಿಯೇ ಶಾಶ್ವತವು- ಉಳಿದವರದು ಅಲ್ಲ

( ಇದರಲ್ಲಿ ಮೊದಲಿನ ಶ್ಲೋಕವು ೧೧೭ನೆಯ ಪದ್ಯಕ್ಕೆ ಒಂದು ಮುಖ್ಯವಾದ ಪ್ರಮಾಣವಾಗಿಯೂ ಇದೆ. )

## ವಿಚಾರ

ಈ ಪದ್ಯದಲ್ಲಿ ಉಪಯೋಗಿಸಿದ ಧೀರಪದವೂ ಪ್ರಮಾಣವಾಗಿಕೊಟ್ಟ ಕಠೋಪನಿಷತ್ ಹೇಳಿದ ಧೀರಪದವೂ ಒಂದೇ ಅಭಿಪ್ರಾಯವುಳ್ಳವುಗಳು. ಒಬ್ಬ ಬ್ರಹ್ಮನಿಗೆ ಅನೇಕರೂಪಗಳೂ ಆ ಅನೇಕ ರೂಪಗಳಿಂದ ಒಬ್ಬಬ್ರಹ್ಮನೂ ಆದರು ಎಂದು ಬೋಧಿಸುತ್ತವೆ. ಧೀರ ವೀರ ಎಂಬೆರಡುಪದಗಳೂ

ಒಂದೇ ಅರ್ಥವುಳ್ಳವುಗಳು. ಆದುದರಿಂದಲೇ ಆ ಅಭಿಪ್ರಾಯವನ್ನು ಮಾನಿಸುವ ಶಿವಾದ್ವೈತಿಗಳಿಗೆ ವೀರಶೈವ ಎಂಬ ಹೆಸರು ಬಂದಿದೆ.

---

೧೨೬ ಇಷ್ಟಲಿಂಗದಿ ಮನವ | ನೆಟ್ಟನೆಯೆ, ನೆಲೆಗೊಳಿಸಿ
ಅಷ್ಟವಿಧಸಕೀಲ—ಗಳನರಿದು ಚರಿಸಲ್ಕೆ
ಇಷ್ಟ ಮಹಲಿಂಗ ದೊಳಗೈಕ್ಯ

ತಾತ್ಪರ್ಯ

ಇಷ್ಟಲಿಂಗದಲ್ಲಿ ಮನಸ್ಸನ್ನು ಚನ್ನಾಗಿ ನೆಲೆಗೊಳಿಸಿ ಲಿಂಗದ ಸಕೀಲ ಗಳನ್ನು ತಿಳಿದು ನಡೆಯಲು ಇಷ್ಟ ಲಿಂಗದ ರೂಪವಾದ ಮಹಾಲಿಂಗದಲ್ಲಿ ತಾನು ಕೂಡಿದವನಾಗುತ್ತಾನೆ.

ವಿಚಾರ

ಆರು ಸ್ಥಲಗಳು, ಆರು ಲಿಂಗಗಳು, ಆರು ಜ್ಞಾನೇಂದ್ರಿಯಗಳು, ಆರು ಅಂತಃಕರಣಗಳು, ಆರು ವಿಷಯಗಳು ಆರು ಶಕ್ತಿಗಳು, ಆರು ಭಕ್ತಿ ಗಳು ಆರು ಸಾದಾಖ್ಯಗಳು ಹೀಗೆ ಇರುವ ಎಂಟು ವಿಧಗಳನ್ನು ಲಿಂಗದಲ್ಲಿ ಸ ಮರಸ ಮಾಡುವುದು ಅಷ್ಟವಿಧದ ಸಕೀಲ ಎನ್ನಿಸಿಕೊಳ್ಳುತ್ತದೆ. ಆರು ಲಿಂಗಗಳಿಗೆ ಹೀಗೆ ಕೂಡಿದಾಗ ಒಟ್ಟು ನಾಲ್ವತ್ತೆಂಟು ಆಗುತ್ತವೆ. ಅಗ ನಾಲ್ವತ್ತೆಂಟು ವಿಧದ ಸಕೀಲಎನ್ನಿಸಿಕೊಳ್ಳುತ್ತದೆ.

---

೧೨೭ ತರುಣಾರ್ಕ ಶತಕೋಟಿ | ಕಿರಣಪ್ರಕಾಶನೆ
ಮರಣಭವಬಾಧೆ—ಗಳ ಪರಿವ ಕರರುಹದ
ಅರುಣಾಚಲೇಶ ಸಲಹೆಮ್ಮ

ತಾತ್ಪರ್ಯ

ನೂರುಕೋಟಿ ಬಾಲಸೂರ್ಯರ ಕಿರಣದಂತೆ ಪ್ರಕಾಶವುಳ್ಳವನೇ, ಸಾಯುವ ಮತ್ತು ಹುಟ್ಟುವಬಾಧೆಗಳನ್ನು ಹೋಗಲಾಡಿಸುವ, ಹಸ್ತದ ಲ್ಲಿ ಹುಟ್ಟಿದವನಾದ ಎಂದರೆ ಲಿಂಗಸ್ವರೂಪನಾದ ಅರುಣಾಚಲೇಶ ಎಂಬ ಹೆಸರುಳ್ಳ ಇಷ್ಟಲಿಂಗವೇ ನಮ್ಮನ್ನು ಕಾಪಾಡು. ಇಷ್ಟಲಿಂಗದ ಸ್ವರೂಪವನ್ನು ಗುರುವಿನ ಹೆಸರಿನಲ್ಲಿ ತಿಳಿಯುವ ಪದ್ಧತಿಯು ಪೂರ್ವಿಕರಲ್ಲಿ ಇದ್ದುದರಿಂದ, (ಅರುಣಾಚಲೇಶ ಎಂಬುವವರು ಗ್ರಂಥಕರ್ತರಗುರು ವಾಗಿಯೂ ಇರಬಹುದು.)

ವಿಚಾರ

ಅರುಣಾಚಲೇಶ ಎಂಬುದು ಗ್ರಂಥಕರ್ತರ ಅಂಕಿತ.

ವಾಗದ್ವೈತ ನಿರಸನ ಪ್ರಬಂಧ, ಸಂಪೂರ್ಣಂ. ಮಂಗಲಂ.